4 ರಫ್ತುದಾರನ ಅಭಿಕರ್ತ ಅಥವಾ ಬ್ಯಾಂಕ್‌ನ ದಿವಾಳಿತನದಿಂದ ಉಂಟಾಗುವ ನಷ್ಟ.
5 ವಾಣಿಜ್ಯ ವಿಮಾ ಕಂಪನಿಗಳು ವಿಮಾ ಸೌಲಭ್ಯ ಒದಗಿಸುವ ಯಾವುದೇ ನಷ್ಟಸಂಭವದ ವಿರುದ್ಧ ವಿಮೆಮಾಡದಿರುವುದರಿಂದ ಸಂಭವಿಸಬಹುದಾದ ನಷ್ಟ.
6 ವಿನಿಮಯ ದರದ ವ್ಯತ್ಯಾಸದಿಂದ ಸಂಭವಿಸುವ ನಷ್ಟ. ಈ ತೆರನ ನಷ್ಟಕ್ಕೆ "ವಿನಿಮಯ ವ್ಯತ್ಯಾಸ ನಷ್ಟ ಸಂಭವದ ವಿರುದ್ಧ ವಿಮೆ" ಮಾಡಿಸಿರುವವರಿಗೆ ಕೆಲವು ಗರಿಷ್ಠ ಮಿತಿಗೊಳಪಟ್ಟು ರಕ್ಷಣೆ ದೊರೆಯುತ್ತದೆ.

ರಫ್ತುದಾರರಿಗೆ ಸಂಭವಿಸುವ ನಷ್ಟವನ್ನು ತುಂಬಿಕೊಡುವುದು ನಿಗಮದ ಮೂಲೋದ್ದೇಶವಾದರೂ ನಷ್ಟದ ಸ್ವಲ್ಪಭಾಗವನ್ನು ರಫ್ತುದಾರರೂ ಭರಿಸಬೇಕೆಂಬುದು ವಿಶ್ವದೆಲ್ಲೆಡೆ ನಡೆದುಬಂದ ಸಂಪ್ರದಾಯ. ಹಾಗಾಗಿ ಮೇಲಿನ ಎಲ್ಲ ಸಂದರ್ಭಗಳಲ್ಲಿಯೂ ನಷ್ಟದ ಪ್ರತಿಶತ 90ರಷ್ಟನ್ನು ಮಾತ್ರ ನಿಗಮ ತುಂಬಿಕೊಡುತ್ತದೆ.

ಈ ಮೊದಲೇ ತಿಳಿಸಿದಂತೆ ರಫ್ತುದಾರ ತನ್ನ ಸಂಪೂರ್ಣ ವಹಿವಾಟನ್ನು ವಿಮೆಮಾಡಿಸಬೇಕು. ವಿಮಾಶುಲ್ಕ ಆಮದುದಾರನ ದೇಶದ ಮೇಲೆ, ಹಾಗೂ ಪಾವತಿಯ ಷರತ್ತುಗಳ ಮೇಲೆ ಅವಲಂಬಿತವಾಗಿದೆ. ಪ್ರತಿ ತಿಂಗಳೂ ರಫ್ತುದಾರರು ತಾವು ಮಾಡಿಕೊಂಡ ರಫ್ತು ಕರಾರುಗಳನ್ನು, ಸರಕು ರವಾನೆಯ ವಿವರಗಳನ್ನು ವಿಮಾಶುಲ್ಕದೊಡನೆ ನಿಗಮದ ಕಛೇರಿಗೆ ಸಲ್ಲಿಸುವುದರ ಮೂಲಕ ವಿಮಾರಕ್ಷಣೆ ಪಡೆಯಬಹುದು.

ಹಣ ಪಾವತಿಯಾಗಬೇಕಾದ ದಿನದಿಂದ 30 ದಿನಗಳೊಳಗಾಗಿ ಹಣ ಪಾವತಿಯಾಗದಿದ್ದಲ್ಲಿ ನಿರ್ದಿಷ್ಟ ನಮೂನೆಯಲ್ಲಿ ನಿಗಮಕ್ಕೆ ಅರ್ಜಿ ಸಲ್ಲಿಸಬೇಕು. ಆಮದುದಾರನಿಗೆ ಪಾವತಿ ಮಾಡಲು ಹೆಚ್ಚಿನ ಕಾಲಾವಧಿ ನೀಡುವುದಾಗಲಿ, ಬೆಲೆ ಕಡಿಮೆ ಮಾಡುವುದಾಗಲಿ ಅಥವಾ ಯಾವುದೇ ತೆರನ ರಿಯಾಯಿತಿ ತೋರಿಸುವ ಉದ್ದೇಶವಿದ್ದಲ್ಲಿ ನಿಗಮದ ಪೂರ್ವಾನುಮತಿ ಪಡೆಯುವುದು ಅತ್ಯಗತ್ಯ. ನಂತರ ವಿಮಾಕರ್ತರು ತಮ್ಮ ಹಕ್ಕುದಾವೆಗಳನ್ನು ಸಲ್ಲಿಸಬಹುದು. ಕೆಲವು ಸಂದರ್ಭಗಳನ್ನುಳಿದು ನಾಲ್ಕು ತಿಂಗಳುಗಳೊಳಗೆ ನಷ್ಟವನ್ನು ನಿಗಮ ತುಂಬಿಕೊಡುವುದು.

ಮೇಲೆ ವಿವರಿಸಿದ ವಿಮಾಯೋಜನೆಗಳು ರಫ್ತುದಾರರು ನಿರಂತರವಾಗಿ ಸರಬರಾಜು ಮಾಡುವ ಕಚ್ಚಾಸಾಮಗ್ರಿಗಳ, ಅಲ್ಪಕಾಲೀನ ಹಾಗೂ ದೀರ್ಘಕಾಲೀನ ಉಪಭೋಗಿ ವಸ್ತುಗಳ ಸಮಗ್ರ ವಹಿವಾಟಿಗೆ ವಿಮಾರಕ್ಷಣೆ ಒದಗಿಸುತ್ತವೆ. ಪರದೇಶಗಳಲ್ಲಿ ಯಂತ್ರಸ್ಥಾವರಗಳ ಸ್ಥಾಪನೆ, ಕಾಮಗಾರಿಗಳನ್ನು ಕೈಗೊಳ್ಳುವಿಕೆ ಮುಂತಾದುವುಗಳಲ್ಲಿ ಸಂಭವಿಸಬಹುದಾದ ನಷ್ಟದ ವಿರುದ್ಧ ವಿಮಾರಕ್ಷಣೆಯನ್ನು ನಿರ್ದಿಷ್ಟ ಯೋಜನೆಗಳ ಮೂಲಕ ನಿಗಮ ಒದಗಿಸುತ್ತದೆ.

ಭಾರತೀಯ ತಂತ್ರಜ್ಞರು/ಸಂಸ್ಥೆಗಳು ಪರದೇಶಗಳಲ್ಲಿನ ಜನರಿಗೆ ಹಾಗೂ ಸಂಸ್ಥೆಗಳಿಗೆ ಸಲ್ಲಿಸುವ ವಿಶೇಷ ಸೇವೆಗಳಿಗೆ ಸಲ್ಲಬೇಕಾದ ಸೇವಾಶುಲ್ಕದ ಪಾವತಿಗೂ ವಿಮಾರಕ್ಷಣೆಯನ್ನು ನಿಗಮ ಒದಗಿಸುತ್ತದೆ.

ರಫ್ತುದಾರರು ತಮ್ಮ ಗ್ರಾಹಕರಿಗೆ ಉದರಿ ಸೌಲಭ್ಯ ಕೊಡಬೇಕಾದರೆ ಅವರಿಗೆ ಸ್ಥಳೀಯ ಬ್ಯಾಂಕ್‌ಗಳಿಂದ ಉದರಿ ಸಿಗುವಂತಿರಬೇಕು. ಭಾರತೀಯ ಬ್ಯಾಂಕ್‌ಗಳು ರಫ್ತುದಾರರಿಗೆ ಧಾರಾಳವಾಗಿ ಧನಸಹಾಯ ನೀಡಲು ಮುಂದೆ ಬರುವಂತೆ ನಿಗಮ ಬ್ಯಾಂಕ್‌ಗಳಿಗೆ ಆರ್ಥಿಕ ಖಾತರಿ ನೀಡುತ್ತದೆ.

ಬ್ಯಾಂಕ್‌ಗಳು ರಫ್ತುದಾರರಿಗೆ ನೀಡುವ ಐದು ಬಗೆಯ ಉದರಿ ಸೌಲಭ್ಯಗಳಿಂದ ಉಂಟಾಗಬಹುದಾದ ನಷ್ಟದ ವಿರುದ್ಧ ಖಾತರಿ ನೀಡುತ್ತದೆ. ರಫ್ತು ಉದರಿ ಖಾತರಿ ನಿಗಮ ಹೀಗೆ ತುಂಬಿಕೊಡುವ ನಷ್ಟದ ಪ್ರಮಾಣ ಪ್ರತಿಶತ 66ರಿಂದ 75ರ ವರೆಗೆ ಇದೆ.

ರಫ್ತು ಸಿದ್ಧತಾ ಉದರಿಗೆ ಖಾತರಿ (Packing Credit Guarantee)

ರಫ್ತುಮಾಡಬೇಕಾದ ಸಾಮಗ್ರಿಯನ್ನು ಸ್ಥಳೀಯವಾಗಿ ಖರೀದಿಸಲು, ಅದನ್ನು ರಫ್ತುಯೋಗ್ಯವನ್ನಾಗಿ ಪರಿವರ್ತಿಸಲು ತಗಲುವ ವೆಚ್ಚವನ್ನು ಭರಿಸಲು ನೀಡುವ ಸಾಲವೇ ರಫ್ತುಸಿದ್ಧತಾ ಉದರಿ. ಇದು ಕಚ್ಚಾಸಾಮಗ್ರಿಯ ಬೆಲೆ ಇರಬಹುದು, ಕೆಲಸಗಾರರಿಗೆ ಕೊಡುವ ಕೂಲಿಯನ್ನು ಒಳಗೊಂಡಿರಬಹುದು. ಈ ಉದರಿ ಕೊಡುವ ಮುಂಚೆ, ಸರಕನ್ನು ಸರಬರಾಜು ಮಾಡಲು ರಫ್ತುದಾರ ನಿಶ್ಚಿತ ಆದೇಶ ಪತ್ರ ಅಥವಾ ಉದರಿ ಖಾತರಿ ಪತ್ರ (ಲೆಟರ್ ಆಫ್ ಕ್ರೆಡಿಟ್) ಪಡೆದಿರಬೇಕು. ಆತ ಆಮದುದಾರನಿಂದ ಪಡೆದಿರಬಹುದಾದ ಯಾವುದೇ ಮುಂಗಡಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಉಳಿದ ವೆಚ್ಚಕ್ಕೆ ಮಾತ್ರ ಸಾಲ ಸೀಮಿತವಾಗಿರತಕ್ಕದ್ದು. ಪರದೇಶಗಳಲ್ಲಿ ಕಾಮಗಾರಿಗಳನ್ನು ಕೈಗೊಳ್ಳುವ, ಸೇವಾಸೌಲಭ್ಯ ಒದಗಿಸುವ ರಫ್ತುದಾರರು ವ್ಯಯಿಸಿದ ಪೂರ್ವಭಾವಿ ವೆಚ್ಚವನ್ನು ಭರಿಸಲು ಬ್ಯಾಂಕ್ ನೀಡಲಾದ ಸಾಲಕ್ಕೂ ಈ ಖಾತರಿಯ ರಕ್ಷಣೆ ದೊರೆಯುತ್ತದೆ.

ತಮ್ಮಲ್ಲಿನ ಎಲ್ಲಾ 'ರಫ್ತು ಸಿದ್ಧತೆಗಾಗಿ ಉದರಿ'ಯ ಖಾತೆಗಳ ಮೇಲೆ ಖಾತರಿ ಸೌಲಭ್ಯ ಪಡೆಯುವ ಬ್ಯಾಂಕ್‌ಗಳಿಗೆ ಖಾತರಿ ಶುಲ್ಕದಲ್ಲಿ ಕಡಿತದ ಜೊತೆಗೆ ಸಂಭವಿಸಿದ ಹಾನಿಯ ಪ್ರತಿಶತ 79ರಷ್ಟನ್ನು ನಿಗಮ ತುಂಬಿಕೊಡುವದು. ಎಲ್ಲಾ ಖಾತೆಗಳನ್ನೂ ಖಾತರಿಗೆ ಒಳಪಡಿಸದಿದ್ದಲ್ಲಿ ಆದ ಹಾನಿಯ ಶೇ. 66.66ರಷ್ಟನ್ನು ಮಾತ್ರ ನಿಗಮ ತುಂಬಿಕೊಡುವದು.

### ನಿರ್ಯಾತ ಉತ್ಪಾದನ ಉದರಿಗೆ ಖಾತರಿ (Export Production Finance Guarantee)

ಕೆಲವು ಸಂದರ್ಭಗಳಲ್ಲಿ ರಫ್ತುಮಾಡುವ ಸರಕಿನ ಬೆಲೆ ಆಂತರಿಕ ಮಾರುಕಟ್ಟೆಯಲ್ಲಿ ಪರದೇಶದಲ್ಲಿ ದೊರೆಯುವ

ಬೆಲೆಗಿಂತ ಹೆಚ್ಚಿರಬಹುದು. ರಫ್ತುಮಾಡಲು ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಸರಕಾರ ಸಹಾಯಧನ, ಉತ್ತೇಜನ ಧನ ನೀಡುವ ಮೂಲಕ ಈ ಅಂತರವನ್ನು ತುಂಬಬಹುದು.

ಇಂತಹ ಸಂದರ್ಭಗಳಲ್ಲಿ ಬ್ಯಾಂಕ್ ರಫ್ತಿನಿಂದ ದೊರೆಯಬಹುದಾದ ಹಣಕ್ಕಿಂತ ಹೆಚ್ಚಿನ ಉದರಿ ನೀಡಬಹುದು. ಈ ರೀತಿ ನೀಡಲಾದ ಸಾಲಸೌಲಭ್ಯಗಳಿಗೂ ನಿಗಮ ಖಾತರಿ ನೀಡುತ್ತದೆ.

### ಸರಕು ರವಾನೆ ನಂತರದ ರಫ್ತು ಉದರಿಗೆ ಖಾತರಿ (Post Shipment Export Credit Guarantee)

ರಫ್ತುದಾರ ನಿಶ್ಚಿತ ಸರಕನ್ನು ಸಾಗಣೆದಾರನ ವಶಕ್ಕೆ ಒಪ್ಪಿಸಿದ ನಂತರ ಅದಕ್ಕೆ ಸಂಬಂಧಿಸಿದ ಕಾಗದಪತ್ರಗಳನ್ನು ಆಮದುದಾರನಿಗೆ ಕಳುಹಿಸಬೇಕಾಗುತ್ತದೆ. ಆ ಕಾಗದ ಪತ್ರಗಳು ಅವನಿಗೆ ತಲುಪಿ ಅವನು ಪಾವತಿ ಮಾಡಿದ ಹಣ ರಫ್ತುದಾರನನ್ನು ತಲುಪಲು ಸಾಕಷ್ಟು ಸಮಯ ತಗಲುತ್ತದೆ. ಮಾರಾಟದ ಷರತ್ತಿನಲ್ಲಿ ರಫ್ತುದಾರ ಉದರಿ ಕೊಡಲು ಒಪ್ಪಿದ್ದರೆ ಮತ್ತಷ್ಟು ಕಾಲ ಕಾಯಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಬಂಧಿಸಿದ ಕಾಗದಪತ್ರಗಳ ಆಧಾರದ ಮೇಲೆ ಧನಸಹಾಯ ಮಾಡಬಹುದು. ಇಲ್ಲವೇ ಆಮದುದಾರನ ಮೇಲೆ ರಚಿತವಾದ ಹುಂಡಿಗಳನ್ನು ಕೊಳ್ಳಬಹುದು, ಇಲ್ಲವೇ ವಟಾಯಿಸಬಹುದು. ಈ ರೀತಿಯ ಧನ ಸಹಾಯದಿಂದ ಬ್ಯಾಂಕುಗಳಿಗೆ ಸಂಭವಿಸಬಹುದಾದ ನಷ್ಟದ ವಿರುದ್ಧ ನಿಗಮ ಖಾತರಿ ನೀಡುತ್ತದೆ. ತನ್ನೆಲ್ಲ ಖಾತೆಗಳನ್ನು ಖಾತರಿಗೆ ಒಳಪಡಿಸುವ ಬ್ಯಾಂಕ್‌ಗಳಿಗೆ ಹಾನಿಯ ಪ್ರತಿಶತ 85ರಷ್ಟನ್ನು, ಉಳಿದ ಬ್ಯಾಂಕ್‌ಗಳಿಗೆ ಹಾನಿಯ ಪ್ರತಿಶತ 60ರಷ್ಟನ್ನು ನಿಗಮ ತುಂಬಿಕೊಡುತ್ತದೆ.

### ರಫ್ತು ಉದರಿಗೆ ಖಾತರಿ

ಸರಕಿನ ರವಾನೆ ನಂತರ ರಫ್ತುದಾರನಿಗೆ ಸರಕಾರದಿಂದ ಬರಬಹುದಾದ ಉತ್ತೇಜನ ಧನ, ಸುಂಕದ ಮರುಪಾವತಿಯ ವಿರುದ್ಧ ನೀಡಲಾಗುವ ಸಾಲಸೌಲಭ್ಯದಿಂದ ಬ್ಯಾಂಕ್‌ಗಳಿಗೆ ಉಂಟಾಗಬಹುದಾದ ನಷ್ಟದ ವಿರುದ್ಧ ನಿಗಮ ಖಾತರಿ ನೀಡುತ್ತದೆ.

### ರಫ್ತು ನಿರ್ವಹಣಾ ಸಾಮರ್ಥ್ಯದ ಬಗ್ಗೆ ನೀಡುವ ಖಾತರಿಗೆ ಖಾತರಿ

ರಫ್ತುದಾರರೊಡನೆ ರಫ್ತು ಒಪ್ಪಂದ ಮಾಡಿಕೊಳ್ಳುವುದಕ್ಕೆ ಮುಂಚೆ ರಫ್ತುದಾರರು ನಿರ್ದಿಷ್ಟ ಅವಧಿಯೊಳಗಾಗಿ, ನಿರ್ದಿಷ್ಟಪಡಿಸಿದ ಸರಕನ್ನು ರವಾನಿಸಲು ಅಸಮರ್ಥವಾದಲ್ಲಿ ತನಗೆ ಉಂಟಾಗಬಹುದಾದ ನಷ್ಟವನ್ನು ನಿವಾರಿಸಿಕೊಳ್ಳಲು ಬ್ಯಾಂಕ್ ಒಂದರಿಂದ ರಫ್ತುದಾರ ತನ್ನ ಪಾಲಿನ ಒಪ್ಪಂದವನ್ನು ಪಾಲಿಸದಿದ್ದಲ್ಲಿ ನಿರ್ದಿಷ್ಟ ಮೊತ್ತದ ಹಣ ನೀಡುವ ಖಾತರಿಯೊಂದನ್ನು ಕೇಳಬಹುದು.

ಜಾಗತಿಕ ದರಖಾಸ್ತುಗಳನ್ನು ತುಂಬುವಾಗ ಈ ರೀತಿಯ ಕೋರಿಕೆ ಸಾಮಾನ್ಯ. ಇಂತಹ ಸಂದರ್ಭಗಳಲ್ಲಿ ಬ್ಯಾಂಕ್ ನೀಡುವ ಖಾತರಿಗಳಿಂದ ಉಂಟಾಗುವ ಹಾನಿಯನ್ನು ನಿಗಮ ತುಂಬಿಕೊಡುತ್ತದೆ. ಸಂಭವಿಸಿದ ನಷ್ಟದ ಪ್ರತಿಶತ 75ರಿಂದ 90ರಷ್ಟನ್ನು ನಿಗಮ ತುಂಬಿಕೊಡುತ್ತದೆ.

### ವಿಶೇಷ ಯೋಜನೆಗಳು

ರಫ್ತು ಉದರಿ ಖಾತರಿ ನಿಗಮ ಮೇಲೆ ವಿವರಿಸಿದ ವಿಮಾ ರಕ್ಷಣೆ, ಖಾತರಿಗಳನ್ನಲ್ಲದೆ ವಿದೇಶಿ ಬ್ಯಾಂಕ್‌ಗಳು ನೀಡುವ ಉದರಿ ಖಾತರಿ ಪತ್ರಕ್ಕೆ ತಮ್ಮ ಸಮ್ಮತಿ ಸೂಚಿಸುವ ಭಾರತೀಯ ಬ್ಯಾಂಕ್‌ಗಳಿಗೆ ಅದರಿಂದ ಉಂಟಾಗಬಹುದಾದ ಹಾನಿಯನ್ನೂ, ಇಲ್ಲಿಯ ಸರಕನ್ನು ಕೊಳ್ಳಲು ಅನುಕೂಲವಾಗುವಂತೆ ಆಮದುದಾರನಿಗೆ ನೀಡುವ ಸಾಲಸೌಲಭ್ಯದಿಂದ ಉಂಟಾಗುವ ಹಾನಿಯನ್ನೂ, ವಿದೇಶಗಳಲ್ಲಿ ಬಂಡವಾಳ ಹೂಡುವ ಇಲ್ಲಿಯ ಉದ್ಯಮಶೀಲರಿಗೆ ತಮ್ಮ ಬಂಡವಾಳದ ಮರುಪಾವತಿಯಾಗದಿರುವ, ಲಾಭಾಂಶ ಪಾವತಿಯಾಗದಿರುವ ಸಂದರ್ಭದಲ್ಲಿ ಸಂಭವಿಸುವ ನಷ್ಟವನ್ನೂ ತುಂಬಿಕೊಡಲು ನಿಗಮದ ರಕ್ಷಣೆ ದೊರೆಯುತ್ತದೆ.

ಸಾಮಾನ್ಯವಾಗಿ ವಿನಿಮಯದರದ ಏರಿಳಿತದಿಂದ ಉಂಟಾಗುವ ನಷ್ಟಕ್ಕೆ ನಿಗಮ ವಿಮೆ ಇಳಿಸುವುದಿಲ್ಲ. ಆದರೆ ಜಾಗತಿಕ ದರಖಾಸ್ತುಗಳಲ್ಲಿ ಭಾಗವಹಿಸುವವರ ಅನುಕೂಲಕ್ಕಾಗಿ ವಿಶೇಷ ಯೋಜನೆಯೊಂದರ ಮೂಲಕ ವಿಮಾರಕ್ಷಣೆ ಒದಗಿಸುತ್ತದೆ. ಈ ರಕ್ಷಣೆ ಕೆಲವು ನಿರ್ದಿಷ್ಟ ವಿದೇಶಿನಾಣ್ಯಗಳಿಗೆ ಮಾತ್ರ ದೊರೆಯುವುದಲ್ಲದೆ ಏರಿಳಿತ ಶೇ. 35ಕ್ಕಿಂತ ಹೆಚ್ಚಾದಲ್ಲಿ ವಿಮಾರಕ್ಷಣೆ ದೊರೆಯದು.

# ಬ್ಯಾಂಕ್ ಸಾಲಕ್ಕೆ ಆಧಾರಗಳು

ಕೆ. ಆರ್. ಸುಧೀಂದ್ರ

ವಿಶಾಲ ದೃಷ್ಟಿಯಲ್ಲಿ ಸ್ವಯಂ ಸಾಲಗಾರನೇ ಸಾಲಕ್ಕೆ ಮೂಲಾಧಾರ. ಇಂದಿಗೂ ಇಂಗ್ಲೆಂಡಿನಲ್ಲಿ ಸಾಲ ಕೊಡುವಾಗ ಮುಖ್ಯವಾಗಿ ವ್ಯಕ್ತಿಯ ಪ್ರಾಮಾಣಿಕತೆಗೆ ಆದ್ಯತೆ ನೀಡಲಾಗುತ್ತದೆ. ಪ್ರಾಮಾಣಿಕನೊಬ್ಬ ತನ್ನ ಗೌರವ ಘನತೆಗಳನ್ನು ಕಾಪಾಡಿಕೊಳ್ಳಲು ಸಾಲ ತೀರಿಸುವ ಸಾಧ್ಯತೆ ಹೆಚ್ಚು.

ಸಾಲಗಾರನ ವೈಯಕ್ತಿಕ ಪ್ರತಿಭೂತಿಯಲ್ಲದೆ ಬೇರೆ ವ್ಯಕ್ತಿಯ/ವ್ಯಕ್ತಿಗಳ ಜಂಟಿ ಹೊಣೆಗಾರಿಕೆಯ ಅಥವಾ ಖಾತರಿಯ ರೂಪದಲ್ಲಿ ಆಧಾರವನ್ನೂ ಪಡೆಯಲಾಗುತ್ತದೆ. ಅವರು ಸಾಲವನ್ನು ತೆರಲು ಸಾಲಗಾರನಷ್ಟೇ ಬದ್ಧರಾಗಿರುತ್ತಾರೆ.

ಇಂದಿನ ವ್ಯಾಪಕ ಬ್ಯಾಂಕಿಂಗ್ ಚಟುವಟಿಕೆಗಳಲ್ಲಿ ಸಾಲಗಾರರ ಸಂಖ್ಯೆ ಮತ್ತು ವೈವಿಧ್ಯಗಳು ಹೆಚ್ಚಿರುವುದರಿಂದ ಸಾಲಗಾರನ ಪ್ರಾಮಾಣಿಕತೆಯನ್ನಷ್ಟೇ ಗುರುತಿಸಿ ಸಾಲ ನೀಡುವುದು ಸುಲಭವಲ್ಲ, ಹಾಗೂ ಜಂಟಿ ಹೊಣೆದಾರರು ಅಥವಾ ಖಾತರಿದಾರರನ್ನಷ್ಟೇ ಅವಲಂಬಿಸುವುದೂ ಕೆಲವು ಸಂದರ್ಭಗಳಲ್ಲಿ ಸಾಕೆನಿಸದು. ಅಂತಹ ಸಂದರ್ಭಗಳಲ್ಲಿ ಸ್ಪಷ್ಟವಾದ ಮತ್ತು ಸ್ಫುಟವಾದ ಪ್ರತಿಭೂತಿಗಳನ್ನು ಪಡೆಯಬೇಕಾಗುತ್ತದೆ. ಈ ರೀತಿಯ ಪ್ರತಿಭೂತಿಗಳನ್ನು ಆನುಷಂಗಿಕ ಪ್ರತಿಭೂತಿಗಳೆಂದು ಕರೆಯಬಹುದು.

ಆನುಷಂಗಿಕ ಪ್ರತಿಭೂತಿಗಳು ವಿವಿಧ ಬಗೆಗಳಾಗಿವೆ. ಅವಾವುವೆಂದರೆ—ಅಡವು, ನೈಷೇಧಿಕ ಒಜ್ಜೆ, ಒತ್ತೆ, ತೋರಾಧಾರ, ಒಜ್ಜೆ ಮತ್ತು ನಿಯೋಜನೆ.

## ಅಡವು

ಆಸ್ತಿ ವರ್ಗಾವಣೆ ಅಧಿನಿಯಮದಲ್ಲಿ ಆರು ಬಗೆಯ ಅಡವುಗಳನ್ನು ಹೆಸರಿಸಲಾಗಿದೆ. ಬ್ಯಾಂಕುಗಳು ಸಾಮಾನ್ಯವಾಗಿ ಎರಡು ಬಗೆಯ ಅಡವುಗಳನ್ನು ಪ್ರತಿಭೂತಿಯ ಸಲುವಾಗಿ ಪಡೆಯುತ್ತವೆ. ಅವುಗಳು ಸರಳ ಅಡವು ಮತ್ತು ಹಕ್ಕುಪತ್ರಗಳ ಠೇವಣಿಯಿಂದಾಗುವ ಅಡವು.

ಸರಳ ಅಡವನ್ನು ನೋಂದಾಯಿತ ಅಡವೆಂದೂ, ಕಾನೂನುಬದ್ಧ ಅಡವೆಂದೂ ವ್ಯವಹರಿಸುವುದುಂಟು. ಈ ಅಡವಿಗೆ ಸಂಬಂಧಪಟ್ಟ ಒಪ್ಪಂದದ ವಿವರಗಳನ್ನು ಛಾಪಾ ಕಾಗದದಲ್ಲಿ ಬರೆದು ನೋಂದಾಯಿಸಬೇಕು.

ಹಕ್ಕುಪತ್ರಗಳ ಠೇವಣಿಯಿಂದಾಗುವ ಅಡವನ್ನು ಸಾಮ್ಯ ಅಡವೆಂದೂ ವ್ಯವಹರಿಸಲಾಗುತ್ತದೆ. ಸಾಲಗಾರ ಸಾಲದ ಹಣದ ಮರುಪಾವತಿಯ ಭದ್ರತೆಯ ದೃಷ್ಟಿಯಿಂದ ಬ್ಯಾಂಕಿನಲ್ಲಿ ಅಥವಾ ಬ್ಯಾಂಕಿನ ಮುತಾಲಿಕರಲ್ಲಿ ತನ್ನ ಆಸ್ತಿಗೆ ಸಂಬಂಧಿಸಿದ ಹಕ್ಕುಪತ್ರಗಳನ್ನು ಇರಿಸಿದಲ್ಲಿ, ಕೇವಲ ಆ ಇರಿಸುವಿಕೆಯಿಂದಲೇ ಈ ಬಗೆಯ ಅಡವು ಅಸ್ತಿತ್ವಕ್ಕೆ ಬರುತ್ತದೆ. ಈ ಅಡವಿನ ಬಗ್ಗೆ ಯಾವುದೇ ರೀತಿಯ ಒಪ್ಪಂದವನ್ನು ಉಲ್ಲೇಖಿಸಬಾರದು. ಆದರೆ ಹಕ್ಕುಪತ್ರಗಳನ್ನು ಇರಿಸಿದ ಸಂಗತಿಯನ್ನು ಮಾತ್ರ ಜ್ಞಾಪನಪತ್ರವೊಂದರಲ್ಲಿ ದಾಖಲು ಮಾಡಬಹುದು. ಈ ಜ್ಞಾಪನ ಪತ್ರವನ್ನು ಇಷ್ಟಪಟ್ಟಲ್ಲಿ ನೋಂದಾಯಿಸಲು ಅವಕಾಶವಿದೆ. ಸರಳ ಅಡವಿಗೆ ತಗಲುವಂತೆ ಸ್ಟ್ಯಾಂಪ್ ಶುಲ್ಕ ಮತ್ತು ನೋಂದಾವಣೆಯ ಖರ್ಚು ಈ ಬಗೆಯ ಅಡವಿಗೆ ತಗಲುವುದಿಲ್ಲವಾದುದರಿಂದ ಇದು ಹೆಚ್ಚು ಬಳಕೆಯಲ್ಲಿದೆ. ಮೇಲೆ ಹೇಳಿದ ಎರಡು ಬಗೆಯ ಅಡವುಗಳಲ್ಲೂ, ಅಡವಿಗೆ ಈಡಾದ ಸ್ವತ್ತನ್ನು ಮಾರಾಟಕ್ಕೊಳಪಡಿಸಲು ನ್ಯಾಯಾಲಯದ ಮೂಲಕವೇ ಕ್ರಮ ಜರುಗಿಸಬೇಕು.

## ನೈಷೇಧಿಕ ಒಜ್ಜೆ

ಕರಾರುವಾಕ್ಕಾಗಿ ಹೇಳಬೇಕಾದರೆ ಇದು ಯಾವ ರೀತಿಯಲ್ಲೂ ಸ್ವತ್ತಿನ ಮೇಲೆ ಪ್ರಭಾರವನ್ನುಂಟುಮಾಡುವುದಿಲ್ಲ. ಸಾಲಗಾರ ಸಾಲತೀರುವ ತನಕ ತನ್ನ ಸ್ವತ್ತನ್ನು ಯಾವ ರೀತಿಯಲ್ಲಿಯೂ ಪರಭಾರೆ ಮಾಡುವುದಿಲ್ಲವೆಂದು ಲಿಖಿತ ಮುಚ್ಚಳಿಕೆ ಬರೆದುಕೊಟ್ಟರೆ ಅದು ನಿಷೇಧಾತ್ಮಕ ಒಜ್ಜೆಯೆಂದು ಪರಿಗಣಿಸಲ್ಪಡುತ್ತದೆ. ಬ್ಯಾಂಕು ಸಾಲದ ವಸೂಲಿಗೆ ಕ್ರಮ ಕೈಗೊಂಡಲ್ಲಿ, ಒಜ್ಜೆಗೆ ಒಳಪಟ್ಟ ಸ್ವತ್ತಿನ ಪರಭಾರೆಯಾಗದಂತೆ ಸಾಲಗಾರನ ವಿರುದ್ಧ ನ್ಯಾಯಾಲಯದ ಆಜ್ಞೆಯನ್ನು ಪಡೆಯಲು ಇದು ಸಹಾಯಕವಾಗುವುದು.

## ಒತ್ತೆ

ಚಿನ್ನದ ಆಭರಣಗಳನ್ನು ಬ್ಯಾಂಕಿನ ಸುಪರ್ದಿಗೊಪ್ಪಿಸಿ ಅವುಗಳ ಆಧಾರದ ಮೇರೆಗೆ ಸಾಲಪಡೆಯುವುದು ಒತ್ತೆಯ ಒಂದು ಸಾಮಾನ್ಯ ನಿದರ್ಶನವಾಗಿದೆ. ಒತ್ತೆಯ ಮುಖ್ಯ ಲಕ್ಷಣವೇನೆಂದರೆ, ಒತ್ತೆಗೊಳಪಟ್ಟ ವಸ್ತು ಬ್ಯಾಂಕಿನ

ಸುಪರ್ದಿನಲ್ಲೇ ಇರುವುದು. ನಗದು ಉದರಿ ಸೌಲಭ್ಯಗಳಿಗೆ ಬ್ಯಾಂಕುಗಳಲ್ಲಿ ವ್ಯಾಪಾರಿಗಳು ತಮ್ಮ ಸರಕನ್ನು ಒತ್ತೆಯಿಡುವುದುಂಟು. ಸಾಲದ ಖಾತೆಯಲ್ಲಿ ಅವರು ಧನಿಸಿದ ಮೊತ್ತಕ್ಕೆ ಅನುಸಾರವಾಗಿ ಸರಕನ್ನು ವ್ಯಾಪಾರಕ್ಕಾಗಿ ಬಿಡುಗಡೆ ಮಾಡಲಾಗುತ್ತದೆ. ಆಧಾರವಾದ ಸರಕು ಬ್ಯಾಂಕಿನ ಸುಪರ್ದಿನಲ್ಲೇ ಇರುವುದರಿಂದ ಆ ಸರಕನ್ನು ಮಾರಾಟ ಮಾಡಿ ಹಣವನ್ನು ಪಡೆದುಕೊಳ್ಳುವ ಸೌಲಭ್ಯ ಬ್ಯಾಂಕಿಗೆ ಒದಗುತ್ತದೆ. ಈ ಸಂಬಂಧದ ಷರತ್ತುಗಳನ್ನು ಒಪ್ಪಂದಪತ್ರದಲ್ಲಿ ಅಳವಡಿಸಲಾಗುತ್ತದೆ, ಹಾಗೂ ಭಾರತೀಯ ಕರಾರು ಅಧಿನಿಯಮದಲ್ಲಿ ಈ ಸಂಬಂಧದ ಹಕ್ಕುಗಳು ನಿರ್ದೇಶಿಸಲ್ಪಟ್ಟಿವೆ.

### ತೋರಾಧಾರ

ಬ್ಯಾಂಕಿನ ಸುಪರ್ದು ಒಂದನ್ನು ಬಿಟ್ಟರೆ ಇದು ಒತ್ತೆಯ ಎಲ್ಲಾ ಲಕ್ಷಣಗಳನ್ನೂ ಹೊಂದಿದೆ. ತೋರಾಧಾರಕ್ಕೆ ಒಳಗಾದ ವಸ್ತುವು ಸಾಲಗಾರನ ವಶದಲ್ಲೇ ಉಳಿದು ಅವನ ವ್ಯಾಪಾರ ಅಥವಾ ಉದ್ಯಮಕ್ಕೆ ಬಳಸಲು ಒದಗುವುದರಿಂದ ಇದು ಅನುಕೂಲಕರವಾಗುತ್ತದೆ. ಇಂದು ಹೆಚ್ಚಿನ ಬ್ಯಾಂಕ್ ಸಾಲಗಳು ವ್ಯಾಪಾರದ ಸರಕು, ಯಂತ್ರೋಪಕರಣಗಳು, ಮೋಟಾರು ವಾಹನಗಳು, ಬೆಳೆ, ಜಾನುವಾರುಗಳು, ಪುಸ್ತಕ ಋಣಗಳು ಮುಂತಾದ ಚರಸ್ವತ್ತುಗಳ ತೋರಾಧಾರದ ಮೇಲೆ ನೀಡಲ್ಪಡುತ್ತವೆ. ತೋರಾಧಾರದ ಒಪ್ಪಂದ ಪತ್ರದಲ್ಲಿ, ಪ್ರತಿಭೂತಿಯನ್ನು ಯಾವ ಕ್ಷಣದಲ್ಲಾದರೂ ವಶಕ್ಕೆ ತೆಗೆದುಕೊಂಡು ಮಾರಾಟ ಮಾಡುವ ಹಕ್ಕನ್ನು ಬ್ಯಾಂಕಿಗೆ ನೀಡಲಾಗುತ್ತದೆ.

ತೋರಾಧಾರಕ್ಕೆ ಒಳಪಟ್ಟ ವಿಶಿಷ್ಟ ವಸ್ತುಗಳನ್ನವಲಂಬಿಸಿ ಬ್ಯಾಂಕು ಇನ್ನೂ ಕೆಲವು ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಉದಾಹರಣೆಗೆ, ಅದು ಮೋಟಾರು ವಾಹನವಾಗಿದ್ದರೆ, ಮೋಟಾರು ವಾಹನದ ಶಾಸನದನ್ವಯ ಬ್ಯಾಂಕಿನ ಹೆಸರಿನಲ್ಲಿ ಬಾಡಿಗೆ ಖರೀದಿ ಪ್ರಭಾರವನ್ನು ನೋಂದಾಯಿಸಬೇಕು ; ಪುಸ್ತಕ ಋಣಗಳಾದರೆ ಸಾಲಗಾರನ ಋಣಿಗಳ ದಾಖಲೆಗಳಲ್ಲಿ ಬ್ಯಾಂಕಿನ ಪ್ರಭಾರವನ್ನು ನೋಂದಾಯಿಸಬೇಕು ; ಕಾಫಿ ಬೆಳೆಯಾದರೆ, ಕಾಫಿ ಬೋರ್ಡಿನಿಂದ ಸಾಲಗಾರನಿಗೆ ಸಲ್ಲತಕ್ಕ ಹಣವನ್ನು ಬ್ಯಾಂಕಿಗೇ ನೀಡುವಂತೆ ಸಾಲಗಾರ ಕಾಫಿ ಬೋರ್ಡಿಗೆ ನಿರ್ದೇಶಿಸುವಂತೆ ಏರ್ಪಡಿಸಬೇಕು. ತೋರಾಧಾರ ಕಂಪನಿಗಳ ಅಧಿನಿಯಮದನ್ವಯ ಕಡ್ಡಾಯವಾಗಿ ನೋಂದಾಯಿಸಬೇಕಾದ ಪ್ರಭಾರಗಳ ಪಟ್ಟಿಯಲ್ಲಿ ನಮೂದಿತವಾಗಿದ್ದರೂ, ಅದರ ಸಂಬಂಧದ ಹಕ್ಕುಗಳನ್ನು ಯಾವ ಶಾಸನದಲ್ಲಿಯೂ ನಿರೂಪಿಸಲಾಗಿಲ್ಲ. ಆದರೆ ಒಮ್ಮೆ ತೋರಾಧಾರದ ವಸ್ತು ಬ್ಯಾಂಕಿನ ವಶಕ್ಕೆ ಒಳಪಟ್ಟಮೇಲೆ ಅದನ್ನು ಒತ್ತೆಗೊಳಗಾದ ಪ್ರತಿಭೂತಿಯೆಂದೇ ಪರಿಗಣಿಸಿ ಆ ಸಂಬಂಧದ ಎಲ್ಲಾ ಶಾಸನದತ್ತ ಹಕ್ಕುಗಳನ್ನು ಬ್ಯಾಂಕು ಚಲಾಯಿಸಬಹುದು.

### ನಿಯೋಜನೆ

ಸಾಲಗಾರ ತನಗೆ ಸಲ್ಲತಕ್ಕ ಹಣವನ್ನು ಸ್ವೀಕರಿಸುವ ಹಕ್ಕನ್ನು ಬ್ಯಾಂಕಿನ ಹೆಸರಿಗೆ ವರ್ಗಾಯಿಸಿದರೆ ಅದು ನಿಯೋಜನೆ ಎನಿಸಿಕೊಳ್ಳುತ್ತದೆ. ಕಂಪನಿಗಳ ಷೇರುಗಳು ಮತ್ತು ಜೀವವಿಮಾ ಪಾಲಿಸಿಗಳು ಮುಂತಾದುವುಗಳನ್ನು ಈ ರೀತಿ ನಿಯೋಜಿಸಬಹುದು. ಸದರಿ ಸಂಸ್ಥೆಗಳಲ್ಲಿ ಬ್ಯಾಂಕಿನ ವರ್ಗಾಯಿತ ಹಕ್ಕನ್ನು ನೋಂದಾಯಿಸಬೇಕಾಗುತ್ತದೆ. ಇದಕ್ಕೆ ಜೀವವಿಮಾ ಅಧಿನಿಯಮ ಮತ್ತು ಕಂಪನಿಗಳ ಅಧಿನಿಯಮಗಳಲ್ಲಿ ಅವಕಾಶ ಮಾಡಲಾಗಿದೆ. ಯಾವುದೇ ಸಮಯದಲ್ಲಿ ಬ್ಯಾಂಕು ಪ್ರತಿಭೂತಿಗೊಳಗಾದ ಷೇರುಗಳನ್ನು ಮಾರಾಟ ಮಾಡಬಹುದು ಅಥವಾ ಜೀವವಿಮಾ ಪಾಲಿಸಿಯಾದರೆ ಅದನ್ನು ಜೀವವಿಮಾ ಕಾರ್ಪೊರೇಷನ್ನಿಗೆ ಒಪ್ಪಿಸಿ ಅದರ ತ್ಯಾಗದ ಬೆಲೆಯನ್ನು ಪಡೆಯಬಹುದು.

ಮೇಲೆ ಹೇಳಿದ ಪ್ರತಿಭೂತಿಗಳಲ್ಲದೆ ಕೆಲವು ಮುಂಗಡಗಳನ್ನು ಚೆಕ್, ಹುಂಡಿ (ಸರಕಿನ ಹಕ್ಕುಪತ್ರದ ಜೊತೆಯಲ್ಲಿ ಅಥವಾ ಇಲ್ಲದೆಯೇ) ಮೊದಲಾದ ಪರಕ್ರಾಮ್ಯ ಸಂಲೇಖಗಳ ಆಧಾರದ ಮೇಲೆ ನೀಡಲಾಗುತ್ತದೆ. ಆ ಸಂಲೇಖಗಳನ್ನು ಬ್ಯಾಂಕಿನ ಹೆಸರಿಗೆ ಪರಕ್ರಾಮಿಸುವುದರಿಂದ ಮತ್ತು ಸರಕಿನ ಹಕ್ಕುಪತ್ರಗಳನ್ನು ಬ್ಯಾಂಕಿನ ಹೆಸರಿನಲ್ಲೇ ರಚಿಸುವುದರಿಂದ, ಅವುಗಳಿಗೆ ಸಂದಾಯವಾಗತಕ್ಕ ಹಣವನ್ನು ಪಡೆಯುವುದಕ್ಕೂ, ಸರಕುಗಳನ್ನು ವಶಕ್ಕೆ ತೆಗೆದುಕೊಂಡು ಮಾರಾಟ ಮಾಡುವುದಕ್ಕೂ ಬ್ಯಾಂಕಿಗೆ ಹಕ್ಕು ಒದಗುತ್ತದೆ.

---

# ತೀರುವೆ ಮನೆ—ಒಂದು ನೋಟ

**ಕೆ. ಎಸ್. ಮಹಾಬಲ**

ಬೆಂಗಳೂರು ಬ್ಯಾಂಕರರ ತೀರುವೆ ಮನೆ ಈ ವಾರದಲ್ಲಿ ಇಂತಿಷ್ಟು ಕೋಟಿ ರೂಪಾಯಿಗಳ ಚೆಕ್‌ಗಳನ್ನು ತೀರುವೆ ಮಾಡಿತು ಎಂಬ ಸುದ್ದಿಯ ತುಣುಕು ವಾರ್ತಾ ಪತ್ರಿಕೆಯ ವಾಣಿಜ್ಯ ಅಂಕಣದಡಿ ಪ್ರಕಟವಾದುದನ್ನು ನೀವು ಗುಮನಿಸಿರಬಹುದು. ಅಥವಾ ನಿಮ್ಮ ಬ್ಯಾಂಕ್ ಗುಮಾಸ್ತ "ನಿಮ್ಮ ಖಾತೆಗೆ ಜಮಾ ಮಾಡಿದ್ದ . . . ಬ್ಯಾಂಕ್ ಮೇಲಿನ ಚೆಕ್ಕು ತೀರುವೆಯಲ್ಲಿ ವಸೂಲಾಗಿದೆ" ಎಂದೋ, "ತೀರುವೆ ಮನೆ ಇಂದು ಕಾರ್ಯ ನಿರ್ವಹಿಸಲಿಲ್ಲ. ಆದ್ದರಿಂದ ನೀವು ಸಲ್ಲಿಸಿದ್ದ ಚೆಕ್ ಜಮಾ ಆಗಿಲ್ಲ" ಎಂದೋ ಹೇಳುವುದನ್ನು ನೀವು ಕೇಳಿರಬಹುದು. ಆದರೆ ನೀವು ವಾಣಿಜ್ಯ ವಿಷಯಗಳಲ್ಲಿ ತೀರ ಸಾಮಾನ್ಯವಾದ ಅರಿವನ್ನು ಉಳ್ಳವರಾದರೆ ಈ ಮಾತುಗಳೆಲ್ಲದರ ಅಂತರಾರ್ಥ ಸ್ಪಷ್ಟವಾಗಿ ಹೊಳೆಯದೆ ಹೋಗಬಹುದು. ತೀರುವೆ ಮನೆ ಎಂದರೆ ಏನು ? ತೀರುವೆ ಮನೆ ನಡೆಯದಿದ್ದರೆ ನನ್ನ ಚೆಕ್ಕೇಕೆ ವಸೂಲಾಗಿಲ್ಲ ? ಎಂದೆಲ್ಲಾ ಪ್ರಶ್ನೆಗಳು ಕಾಡಬಹುದು. ಸಂಕ್ಷಿಪ್ತವಾಗಿ ವಿವರಿಸುವುದಾದರೆ, ತೀರುವೆ ಮನೆ ಎಲ್ಲ ಹಣವಾಹಿನಿಗಳ ಸಂಗಮಸ್ಥಳ. ಲಕ್ಷಾಂತರ ಚೆಕ್ಕುಗಳು ಕೈ ಬದಲಿ ಹೊಂದುವ ಕಾರ್ಯಾಗಾರ, ಅಗಾಧವೆಂದು ತೋರುವ ಅಂಕಿಗಳನ್ನು ಒಂದರಲ್ಲಿ ಇನ್ನೊಂದನ್ನು ಕಳೆದು ಸೊನ್ನೆಯಾಗಿಸುವ ಚಮತ್ಕಾರ: ನಗರದ ಯಾವುದೋ ಮೂಲೆಯಲ್ಲಿನ ಬ್ಯಾಂಕಿನ ಮೇಲಿನ ಚೆಕ್ಕಿನ ಹಣವನ್ನು ನೀವಿದ್ದಲ್ಲೇ ನಿಮ್ಮ ಖಾತೆಗೆ ಜಮಾ ಮಾಡುವ ಕ್ರಿಯಾವಿಧಾನ.

ತೀರುವೆ ಮನೆಯ ಕಾರ್ಯವಿಧಾನವನ್ನು ತಿಳಿದುಕೊಳ್ಳುವುದಕ್ಕೆ ಪೂರ್ವಭಾವಿಯಾಗಿ, ಒಂದು ವೇಳೆ ತೀರುವೆ ಮನೆ ಇಲ್ಲದಿದ್ದರೆ ಉಂಟಾಗಬಹುದಾದ ಪರಿಸ್ಥಿತಿಯನ್ನು ವಿಶ್ಲೇಷಿಸುವುದು ಅಪ್ರಸ್ತುತವಾಗಲಾರದು.

ಒಂದು ಅರ್ಥವ್ಯವಸ್ಥೆಯಲ್ಲಿ ಒಂದೇ ಒಂದು ಬ್ಯಾಂಕ್ ಇದೆಯೆಂದು ಭಾವಿಸೋಣ. ಆ ಬ್ಯಾಂಕಿನ ಒಬ್ಬ ಖಾತೆದಾರ 'ಅ', ಮತ್ತೊಬ್ಬ ಖಾತೆದಾರ 'ಬ'ನಿಗೆ ಒಂದು ಬಾಕಿಯ ಇತ್ಯರ್ಥವಾಗಿ ಚೆಕ್ ಒಂದನ್ನು ನೀಡಿದಾಗ 'ಬ' ಹಣವನ್ನು ಪಡೆಯಲು ಚೆಕ್ಕನ್ನು ತನ್ನ ಲೆಕ್ಕಕ್ಕೆ ಸಲ್ಲಿಸುತ್ತಾನೆ. ಆಗ ಬ್ಯಾಂಕ್ ಮಾಡಬೇಕಾಗಿರುವ ಕೆಲಸವೆಂದರೆ 'ಅ' ಖಾತೆ ಋಣಿಸಿ, 'ಬ'ನ ಖಾತೆ ಧನಿಸುವುದು, ಅಷ್ಟೆ. ಮತ್ತೊಂದು ಉದಾಹರಣೆಯಲ್ಲಿ ಒಬ್ಬ ಗ್ರಾಹಕ ತಾನು ಕೊಂಡ ಸರಕಿಗೆ ಪ್ರತಿಫಲವಾಗಿ ವ್ಯಾಪಾರಿಗೆ ಎ ಬ್ಯಾಂಕ್ ಮೇಲೆ ಬರೆದ ರೇಖಿತ ಚೆಕ್ ನೀಡುತ್ತಾನೆ. ಆದರೆ ವ್ಯಾಪಾರಿಯ ಖಾತೆ ಇರುವುದು ಬಿ ಬ್ಯಾಂಕ್‌ನಲ್ಲಿ. ಆತ ಚೆಕ್ಕಿನ ಹಣವನ್ನು ಪಡೆಯಬೇಕಾದರೆ ತನ್ನ ಬ್ಯಾಂಕಿಗೆ ಅದನ್ನು ಸಲ್ಲಿಸಬೇಕು. ಅವನ ಬ್ಯಾಂಕು ಚೆಕ್ಕನ್ನು ಎ ಬ್ಯಾಂಕಿನಲ್ಲಿ ಹಾಜರುಪಡಿಸಿ, ಹಣ ಪಡೆದು ಅನಂತರ ಆ ವ್ಯಾಪಾರಿಯ ಲೆಕ್ಕವನ್ನು ಧನಿಸಬೇಕಾಗುವುದು. ಎರಡು ಬ್ಯಾಂಕ್‌ಗಳ ನಡುವಣ ವ್ಯವಹಾರ ಇಷ್ಟು ಪ್ರಯಾಸಕರವಾಗಿರುವಾಗ ಅಸಂಖ್ಯಾತ ಶಾಖೆಗಳನ್ನು ಹೊಂದಿರುವ ವಿವಿಧ ಬ್ಯಾಂಕುಗಳು ತಮ್ಮ ಲಕ್ಷೋಪಲಕ್ಷ ಗ್ರಾಹಕರಿಂದ ಸ್ವೀಕರಿಸುವ ವೈವಿಧ್ಯಮಯವಾದ ಸಂಲೇಖಗಳನ್ನು ವಸೂಲಿ ಮಾಡುವ ಸುಲಭ ಕ್ರಮವೊಂದು ಇಲ್ಲದಿದ್ದರೆ ಬ್ಯಾಂಕಿಂಗ್ ಕಾರ್ಯಾಚರಣೆ ನಡೆಸುವುದೇ ದುಸ್ತರವಾದೀತು. ಅದರಲ್ಲೂ ಬ್ಯಾಂಕಿಂಗ್ ಅಭ್ಯಾಸ ಜನರಲ್ಲಿ ಹೆಚ್ಚುತ್ತಿರುವ ಈ ಸಮಯದಲ್ಲಿ ಚೆಕ್ ವ್ಯವಹಾರ ಸುಲಭ, ಸುರಕ್ಷಿತ ಹಾಗೂ ಸಮಂಜಸ ಪಾವತಿ ವ್ಯವಸ್ಥೆ ಎಂಬುದು ಸ್ಥಾಪಿತವಾಗುತ್ತಿರುವಾಗ, ಚೆಕ್ಕುಗಳ ವಿಲೇವಾರಿಗೆ ಸರಳವಾದ ವ್ಯವಸ್ಥೆ ಇಲ್ಲದಿದ್ದರೆ ಬ್ಯಾಂಕುಗಳು ತಮ್ಮ ಪರಸ್ಪರ ಬಾಕಿಗಳನ್ನು ತೀರಿಸಿಕೊಳ್ಳುವುದರಲ್ಲೇ ಕಾಲವ್ಯಯ ಮಾಡಬೇಕಾದೀತೇನೋ.

## ತೀರುವೆ ಮನೆ ಆರಂಭಕ್ಕೆ ಮುನ್ನ

'ದಿ ನ್ಯೂ ಕೊಲಂಬಿಯ ಎನ್‌ಸೈಕ್ಲೋಪೀಡಿಯಾ' ಪ್ರಕಾರ ಮೊದಲ ತೀರುವೆ ಮನೆ ಫ್ಲಾರೆನ್ಸ್‌ನಲ್ಲಿ ಕ್ರಿ.ಶ. 800ರಲ್ಲಿ ಅಸ್ತಿತ್ವದಲ್ಲಿತ್ತೆಂದು ತಿಳಿದುಬಂದಿದೆ. ಸುಧಾರಿತ ರೂಪದ ತೀರುವೆ ಮನೆ 1463ರಲ್ಲಿ ಲಯನ್ಸ್‌ನಲ್ಲಿ ಸ್ಥಾಪಿತವಾಯಿತು. ತೀರುವೆ ಮನೆಯ ಪ್ರಭಾವ 18ನೆಯ ಶತಮಾನದಲ್ಲಿ ಯೂರೋಪ್ ಆದ್ಯಂತ ಹರಡಿತೆಂಬುದೂ ಸಿದ್ಧಪಟ್ಟಿದೆ. ಆಧುನಿಕ ತೀರುವೆ ಮನೆ 1768ರಲ್ಲಿ ಎಡಿನ್‌ಬರೊನಲ್ಲಿ ಅಥವಾ 1773ರಲ್ಲಿ ಲಂಡನ್ನಿನಲ್ಲಿ ಸ್ಥಾಪಿತವಾಯಿತು. ಮುಂದೆ ನ್ಯೂಯಾರ್ಕಿನಲ್ಲಿ 1853ರಲ್ಲೂ

ಪ್ಯಾರಿಸ್‌ನಲ್ಲಿ 1872ರಲ್ಲೂ, ಬರ್ಲಿನ್‌ನಲ್ಲಿ 1883ರಲ್ಲೂ ತೀರುವೆ ಮನೆಗಳು ಆರಂಭವಾದುವು. ಇದಕ್ಕೆ ಮುಂಚೆ ಬ್ಯಾಂಕುಗಳು ತಮ್ಮ ಪರಸ್ಪರ ಬಾಕಿಗಳನ್ನು ನಿರ್ದಿಷ್ಟ ಅವಧಿಗಳಲ್ಲಿ 'ರನ್ನರ್'ಗಳನ್ನು ನೇಮಿಸಿಕೊಳ್ಳುವ ಮೂಲಕ ತೀರಿಸಿಕೊಳ್ಳುತ್ತಿದ್ದುವು.

### ತೀರುವೆ ಕಾರ್ಯದ ನಿರ್ವಹಣೆ

ತೀರುವೆ ಕಾರ್ಯಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ಕೇಂದ್ರ ಬ್ಯಾಂಕ್ ಒಂದು ನಿರ್ವಹಿಸುತ್ತದೆ. ಭಾರತದಲ್ಲಿ ಈ ಜವಾಬ್ದಾರಿಯನ್ನು ಹೊರುವುದು :

ಅ ರಿಸರ್ವ್ ಬ್ಯಾಂಕ್ ಇರುವೆಡೆಯಲ್ಲೆಲ್ಲಾ (ಅಂದರೆ ಬೊಂಬಾಯಿ, ದೆಹಲಿ, ಮದ್ರಾಸು, ಬೆಂಗಳೂರುಗಳಂಥ ಮಹಾನಗರಗಳು) ರಿಸರ್ವ್ ಬ್ಯಾಂಕ್.

ಆ ರಿಸರ್ವ್ ಬ್ಯಾಂಕ್ ಇಲ್ಲದೆಡೆ ಭಾರತೀಯ ಸ್ಟೇಟ್ ಬ್ಯಾಂಕಿನ ಮುಖ್ಯ ಶಾಖೆ.

ಇ ಭಾರತೀಯ ಸ್ಟೇಟ್ ಬ್ಯಾಂಕ್ ಇಲ್ಲದೆಡೆ ಅದರ ಸಹವರ್ತಿ ಬ್ಯಾಂಕ್‌ನ ಮುಖ್ಯ ಶಾಖೆ. (ಒಂದು ವೇಳೆ ಮುಂದೆ ಭಾರತೀಯ ಸ್ಟೇಟ್ ಬ್ಯಾಂಕ್ ಆರಂಭವಾದರೂ ಆ ಸಹವರ್ತಿ ಬ್ಯಾಂಕ್ ತೀರುವೆ ಕಾರ್ಯವನ್ನು ಮುಂದುವರಿಸಿಕೊಂಡು ಬರುತ್ತದೆ.)

ನಿರ್ವಹಿಸುವ ಬ್ಯಾಂಕಿನ ವ್ಯವಸ್ಥಾಪಕರು ತೀರುವೆ ಮನೆಯ ಅಧ್ಯಕ್ಷರಾಗಿರುತ್ತಾರೆ. ಎಲ್ಲ ಬ್ಯಾಂಕುಗಳ ಪ್ರತಿನಿಧಿಗಳಿಂದ ಕೂಡಿದ ಕಾರ್ಯಕಾರಿ ಮಂಡಳಿಯೊಂದು ರಚಿತವಾಗಿರುತ್ತದೆ. ಹೊಸ ಸದಸ್ಯತ್ವವನ್ನು ಬಯಸಿ ಬಂದ ಬ್ಯಾಂಕಿನ ಅರ್ಜಿ ಹಾಲೀ ಸದಸ್ಯ ಬ್ಯಾಂಕೊಂದರಿಂದ ಸೂಚಿತವಾಗಿ, ಮತ್ತೊಂದು ಸದಸ್ಯ ಬ್ಯಾಂಕಿನಿಂದ ಅನುಮೋದಿತವಾಗಿರಬೇಕು. ಸದಸ್ಯತ್ವ ಪಡೆಯಲು ಮೂರನೆಯ ಎರಡರಷ್ಟು ಸದಸ್ಯರ ಬಹುಮತ ಅಗತ್ಯ. ಈ ವಿಷಯದಲ್ಲಿ ಮತಚಲಾವಣೆ ಅಗತ್ಯವಾದರೆ ನಡೆಸಬಹುದು. ಸಹ ಸದಸ್ಯತ್ವವನ್ನು (ಅಂದರೆ ಸದಸ್ಯ ಬ್ಯಾಂಕ್ ಒಂದರ ಮೂಲಕ ಕಾರ್ಯಾಚರಣೆ ನಡೆಸುವುದು) ಪಡೆಯಬಯಸುವ ಬ್ಯಾಂಕುಗಳೂ ಮೇಲಿನ ಕ್ರಮವನ್ನೇ ಅನುಸರಿಸಬೇಕಾಗುವುದು. ಯಾವುದೇ ಬ್ಯಾಂಕು ಸದಸ್ಯತ್ವ ತ್ಯಜಿಸಲು 10 ದಿನಗಳ ಸೂಚನೆ ನೀಡಬೇಕು. ಒಂದು ಸದಸ್ಯ ಬ್ಯಾಂಕಿನ ಉಚ್ಚಾಟನೆಗೆ ನಾಲ್ಕನೆಯ ಮೂರರಷ್ಟು ಬಹುಮತದ ಅಗತ್ಯವಿದೆ. ಅಧ್ಯಕ್ಷರಿಗೆ ಇಂಥ ಸಂದರ್ಭಗಳಲ್ಲಿ ನಿರ್ಣಾಯಕ ಮತದ ಅಧಿಕಾರವಿದೆ. ಸದಸ್ಯ ಬ್ಯಾಂಕುಗಳು ತೀರುವೆ ಮನೆಗೆ ಕರಾರುವಾಕ್ಕಾಗಿ ಹಾಜರಾಗಬೇಕು. ಒಂದು ವೇಳೆ ಹಾಜರಾಗಲು ಸಾಧ್ಯವಾಗದಿದ್ದಲ್ಲಿ ನಿರ್ವಹಿಸುವ ಬ್ಯಾಂಕಿಗೆ ಕನಿಷ್ಠ 48 ಗಂಟೆಗಳ ಪೂರ್ವಸೂಚನೆ ನೀಡಬೇಕು, ಮತ್ತು ಪ್ರತಿಯೊಂದು ಸದಸ್ಯ ಬ್ಯಾಂಕೂ, ನಿರ್ವಹಿಸುವ ಬ್ಯಾಂಕಿನಲ್ಲಿ ಕನಿಷ್ಠ ರೂ. 50,000 ಶಿಲ್ಕು ಇಡಬೇಕು.

### ವ್ಯವಹಾರದ ಸಂಲೇಖಗಳು

ತೀರುವೆ ಮನೆಯಲ್ಲಿ ವ್ಯವಹರಿಸಲಾಗುವ ಸಂಲೇಖಗಳೆಂದರೆ :

1 ಪರಾಕ್ರಾಮ್ಯ ಸಂಲೇಖಗಳಾದ ಚೆಕ್, ಡ್ರಾಫ್ಟ್‌ಗಳು,
2 ಸರಕಾರಿ ಪಾವತಿ ಆದೇಶಗಳು, ಬಂಡವಾಳ ಪತ್ರಗಳ ಮೇಲಿನ ಬಡ್ಡಿ ಆದೇಶಗಳು,
3 ಕಂಪನಿ ತನ್ನ ಷೇರುದಾರರಿಗೆ ನೀಡಿದ ಲಾಭಾಂಶ/ಬಡ್ಡಿ ಆದೇಶಗಳು,
4 ಉಡುಗೊರೆ ಚೆಕ್‌ಗಳು ಹಾಗೂ ಪ್ರವಾಸಿ ಚೆಕ್‌ಗಳು,
5 ವಿದೇಶೀ ಬ್ಯಾಂಕುಗಳು ಮತ್ತು ಬಾತ್ಮೀದಾರ ಸಂಸ್ಥೆಗಳು ನೀಡಿದ ಡ್ರಾಫ್ಟ್, ಅಂಚೆ ವರ್ಗಾವಣೆ ಆದೇಶಗಳು,
6 ಮೋಚನಾ ಮೌಲ್ಯ ಖಚಿತವಾಗಿ ವ್ಯಕ್ತವಾಗಿರುವ ಕರೆ ಠೇವಣಿ ರಸೀತಿಗಳು.

### ಕಾರ್ಯವಿಧಾನ

ಬ್ಯಾಂಕಿನ ಗ್ರಾಹಕನೊಬ್ಬ ತನ್ನ ಖಾತೆಗೆ ಬೇರೊಂದು ಬ್ಯಾಂಕಿನ ಮೇಲೆ ಬರೆದ ಚೆಕ್ಕೊಂದನ್ನು ಸಲ್ಲಿಸಿದೊಡನೆಯೇ ತೀರುವೆ ಕಾರ್ಯದ ಪ್ರಥಮ ಹಂತ ಆರಂಭವಾಗುತ್ತದೆ. ಹೀಗೆ ವಿವಿಧ ಗ್ರಾಹಕರಿಂದ ಸ್ವೀಕರಿಸಿದ ಬೇರೆ ಬೇರೆ ಬ್ಯಾಂಕುಗಳ ಚೆಕ್ಕುಗಳನ್ನು ಅದರೊಡನೆಯೇ ಸಲ್ಲಿಸಿದ ಜಮಾ ಚೀಟಿಗಳ ಮೊಬಲಗಿನೊಂದಿಗೆ ಸರಿ ನೋಡಿ, ವರ್ಗಾವಣೆ ಪುಸ್ತಕದಲ್ಲಿ ನಮೂದು ಮಾಡಲಾಗುತ್ತದೆ. ಚೆಕ್ಕುಗಳನ್ನು ಬ್ಯಾಂಕುವಾರು ವಿಂಗಡಿಸಿ ಪ್ರತಿಯೊಂದು ಬ್ಯಾಂಕಿನ ಚೆಕ್ಕುಗಳಿಗೂ ಪ್ರತ್ಯೇಕವಾಗಿ ಪಟ್ಟಿಯೊಂದನ್ನು ತಯಾರು ಮಾಡಲಾಗುತ್ತದೆ. ವಿವಿಧ ಬ್ಯಾಂಕುಗಳ ಮೇಲಿನ ಚೆಕ್ಕುಗಳ ಮೊತ್ತಕ್ಕೆ ಒಟ್ಟು ಜಮಾ ಚೀಟಿಗಳ ಮೊತ್ತ ಸರಿ ಹೊಂದಬೇಕು. ಹೇಗೆಂದರೆ, ಜಮಾ ಚೀಟಿಗಳು ವಿವಿಧ ಖಾತೆಗಳಿಗೆ ಧನಿಸಬೇಕಾದ ಮೊತ್ತವಾದರೆ, ಚೆಕ್ಕುಗಳದು ಬೇರೆ ಬ್ಯಾಂಕುಗಳಿಂದ ಬರಬೇಕಾದ ಹಣ.

ಮೇಲಿನ ಕಾರ್ಯ ನಡೆಯುವುದು ಬ್ಯಾಂಕಿನ ಒಂದು ಶಾಖೆಯಲ್ಲಿ. ಹೀಗೆ ವಿವಿಧ ಶಾಖೆಗಳ ತೀರುವೆ ಚೆಕ್ಕುಗಳನ್ನು ಆ ಬ್ಯಾಂಕಿನ ಮುಖ್ಯ ಶಾಖೆಯಲ್ಲಿ ಸಂಕಲಿಸಿ ಪ್ರತಿಯೊಂದು ಬ್ಯಾಂಕಿನಿಂದ ಬರಬೇಕಾದ ಮೊತ್ತಕ್ಕೆ ಮುಖ್ಯ ತಃಖ್ತೆಯೊಂದನ್ನು ಸಿದ್ಧಪಡಿಸಲಾಗುತ್ತದೆ. ಮುಂದಿನ ಕಾರ್ಯಾಚರಣೆಗಳೆಲ್ಲ ನಡೆಯುವುದು ತೀರುವೆ ಮನೆಯಲ್ಲಿ. ಅಲ್ಲಿ ಒಂದು ನಿರ್ದಿಷ್ಟ ಸಮಯದಲ್ಲಿ ಎಲ್ಲ ಬ್ಯಾಂಕುಗಳ ಪ್ರತಿನಿಧಿಗಳೂ ಸೇರಿ ಚೆಕ್ಕುಗಳನ್ನು ಪರಸ್ಪರ ಬದಲು ಮಾಡಿಕೊಳ್ಳುತ್ತಾರೆ. ಅನಂತರ ಆ ಪ್ರತಿನಿಧಿಗಳು ವಿವಿಧ ಬ್ಯಾಂಕುಗಳಿಗೆ ನೀಡಿದ ಚೆಕ್ಕುಗಳ ಸಂಖ್ಯೆ, ಅವುಗಳ ಮೊಬಲಗು, ಸ್ವೀಕರಿಸಿದ (ಒಳಮುಖ ತೀರುವೆ) ಚೆಕ್‌ಗಳ ಸಂಖ್ಯೆ, ಅವುಗಳ ಮೊಬಲಗು ಇವನ್ನು ಬ್ಯಾಂಕುವಾರು ನಮೂದಿಸಿ, ಮುಂದೆ ಕಾಣಿಸಿರುವಂತೆ ತೀರುವೆ ಮನೆ ಇತ್ಯರ್ಥ ಪಟ್ಟಿಯೊಂದನ್ನು ಸಿದ್ಧಪಡಿಸುತ್ತಾರೆ :

**1 ಅ ಬ್ಯಾಂಕ್ ಲಿಮಿಟೆಡ್ :**

ತೀರುವೆ ಮನೆ ಇತ್ಯರ್ಥ ತಃಖ್ತೆ

| ಕ್ರಮ ಸಂಖ್ಯೆ | ಸಂಕೇತ ಸಂಖ್ಯೆ | ಬ್ಯಾಂಕ್ | ಚೆಕ್ ಸಂಖ್ಯೆ | ಹೊರತೀರುವೆ ಮೊಬಲಗು | ಚೆಕ್ ಸಂಖ್ಯೆ | ಒಳತೀರುವೆ ಮೊಬಲಗು |
|---|---|---|---|---|---|---|
| | | | | ರೂ. ಪೈ. | | ರೂ. ಪೈ. |
| | | ಬ ಬ್ಯಾಂಕ್ | 60 | 50, 100.00 | 49 | 10,200.10 |
| | | ಡ ಬ್ಯಾಂಕ್ | | — | | — |
| | | ಕ ಬ್ಯಾಂಕ್ | | — | | — |
| | | ಇ ಬ್ಯಾಂಕ್ | | — | | — |
| | | ಒಟ್ಟು | | | | |

ನಿವ್ವಳ ಶಿಲ್ಕು ಬರಬೇಕಾದ್ದು (ಧನಿಸಿ) / ನೀಡಬೇಕಾದ್ದು (ಋಣಿಸಿ) ರೂ...............................

**2 ಬ ಬ್ಯಾಂಕ್ ಲಿಮಿಟೆಡ್ :**

ತೀರುವೆ ಮನೆ ಇತ್ಯರ್ಥ ತಃಖ್ತೆ

| ಕ್ರಮ ಸಂಖ್ಯೆ | ಸಂಕೇತ ಸಂಖ್ಯೆ | ಬ್ಯಾಂಕು | ಚೆಕ್ ಸಂಖ್ಯೆ | ಹೊರಮುಖ ತೀರುವೆ ಮೊಬಲಗು | ಚೆಕ್ ಸಂಖ್ಯೆ | ಒಳಮುಖ ತೀರುವೆ ಮೊಬಲಗು |
|---|---|---|---|---|---|---|
| | | | | ರೂ. ಪೈ. | | ರೂ. ಪೈ. |
| | | ಅ ಬ್ಯಾಂಕ್ | 49 | 10,200.10 | 60 | 50,100.00 |
| | | ಡ ಬ್ಯಾಂಕ್ | | — | | — |
| | | ಕ ಬ್ಯಾಂಕ್ | | — | | — |
| | | ಇ ಬ್ಯಾಂಕ್ | | — | | — |
| | | ಒಟ್ಟು : | | | | |

ನಿವ್ವಳ ಶಿಲ್ಕು ಬರಬೇಕಾದ್ದು (ಧನಿಸಿ) / ನೀಡಬೇಕಾದ್ದು (ಋಣಿಸಿ) ರೂ...................................

(ಅ ಬ್ಯಾಂಕ್‌ನ ಹೊರಮುಖ ತೀರುವೆ ಚೆಕ್ (ಬರಬೇಕಾದ್ದು) ಬ ಬ್ಯಾಂಕ್‌ನ ಒಳಮುಖ ತೀರುವೆ ಚೆಕ್ (ನೀಡಬೇಕಾದ್ದು) ಆಗಿ ವಿರುದ್ಧ ಅಂಕಣದಲ್ಲಿ ನಮೂದಾಗಿರುವುದನ್ನು ಗಮನಿಸಬಹುದು).

ಒಂದು ಬ್ಯಾಂಕಿನ ಹೊರಮುಖ ತೀರುವೆಯ ಚೆಕ್ಕುಗಳ ಮೊತ್ತ (ಬೇರೆ ಬ್ಯಾಂಕ್‌ಗೆ ಕೊಟ್ಟದ್ದು) ಒಳಮುಖ ತೀರುವೆಯ ಚೆಕ್‌ಗಳ ಮೊತ್ತಕ್ಕಿಂತ (ಬೇರೆ ಬ್ಯಾಂಕ್‌ನಿಂದ ಬಂದದ್ದು) ಹೆಚ್ಚಾಗಿದ್ದರೆ, ಆ ಬ್ಯಾಂಕು ಒಟ್ಟಾರೆ ಅನುಕೂಲ ಶಿಲ್ಕು ಹೊಂದಿರುತ್ತದೆ. ತದ್ವಿರುದ್ಧವಾಗಿದ್ದರೆ ಪ್ರತಿಕೂಲ ಶಿಲ್ಕು ಹೊಂದಿರುತ್ತದೆ.

ಹೀಗೆ ಪ್ರತಿಯೊಂದು ಬ್ಯಾಂಕಿನ ಪ್ರತಿನಿಧಿಯೂ ಸಲ್ಲಿಸುವ ತಃಖ್ತೆಯಲ್ಲಿನ ನಿವ್ವಳ ಪರಿಣಾಮ ಪ್ರತಿಕೂಲವೇ ಅಥವಾ ಅನುಕೂಲವೇ ಎಂಬುದನ್ನು ತೀರುವೆ ಮನೆ ದಾಖಲೆ ಪುಸ್ತಕದಲ್ಲಿ ನಮೂದಿಸಲಾಗುತ್ತದೆ. ಅನುಕೂಲ ಮೊಬಲಗುಗಳ ಮೊತ್ತ ಪ್ರತಿಕೂಲ ಮೊಬಲಗುಗಳ ಮೊತ್ತಕ್ಕೆ ಸಮನಾಗಿರಬೇಕು. ಅಂದರೆ ಮಾತ್ರ ತೀರುವೆ ಮನೆ ಲೆಕ್ಕ ತಾಳೆಯಾದಂತೆ. ಹೇಗೆಂದರೆ, ಆ ಭ್ಯಾಂಕು ನೀಡಿದ ಬ ಬ್ಯಾಂಕಿನ ಚೆಕ್ಕುಗಳ ಮೊತ್ತ (ಹೊರಮುಖ ತೀರುವೆ) ಬ ಬ್ಯಾಂಕಿನ ಒಳಮುಖ ತೀರುವೆ (ಕೊಡಬೇಕಾದ್ದು) ಅಂಕಣದಲ್ಲಿ ನಮೂದಿತವಾಗಿರುತ್ತದೆ. ಹೀಗೆ ಅಂತಿಮವಾಗಿ ಎಲ್ಲ ಬ್ಯಾಂಕುಗಳ ಪರಸ್ಪರ ಬಾಕಿಗಳೂ ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಇರುವುದರಿಂದ ನಿರ್ವಹಿಸುವ ಬ್ಯಾಂಕ್ ವಿವಿಧ ಬ್ಯಾಂಕ್‌ಗಳಿಂದ ಸ್ವೀಕರಿಸುವ ಮೊತ್ತ ಅದು ನೀಡುವ ಮೊತ್ತಕ್ಕೆ ಸಮನಾಗಿರಬೇಕು. ಏಕೆಂದರೆ ನಿರ್ವಹಿಸುವ ಬ್ಯಾಂಕು ಹಣದ ಬದಿ ಬದಲಿಸುವ ಅಭಿಕರ್ತೃ ಮಾತ್ರವಷ್ಟೆ. ಹೀಗೆ ಅನುಕೂಲ ಹಾಗೂ ಪ್ರತಿಕೂಲ ಶಿಲ್ಕುಗಳ ಮೊತ್ತ ಸಮಸ್ಥಿತಿಗೆ ಬಂದೊಡನೆ ತೀರುವೆ ಮನೆ ಬರಖಾಸ್ತಾಗುತ್ತದೆ. ನಿರ್ವಹಿಸುವ ಬ್ಯಾಂಕು ಅನುಕೂಲ ಶಿಲ್ಕು ಹೊಂದಿರುವ ಬ್ಯಾಂಕುಗಳ ಖಾತೆಯನ್ನು ಧನಿಸಿ, ಪ್ರತಿಕೂಲ ಶಿಲ್ಕು ಹೊಂದಿರುವ ಖಾತೆಗಳನ್ನು ಋಣಿಸುತ್ತದೆ.

ಬ್ಯಾಂಕುಗಳು ತಾವು ಸ್ವೀಕರಿಸಿದ ಒಳಮುಖ ತೀರುವೆ ಚೆಕ್‌ಗಳನ್ನು, ಚೆಕ್ಕುಗಳ ಮೊತ್ತ ಸರಿಯಾಗಿದೆಯೇ ಎಂದು ಪರಿಶೀಲಿಸಿ, ಆ ಚೆಕ್ಕುಗಳು ಪ್ರತಿನಿಧಿಸುವ ವಿವಿಧ ಖಾತೆಗಳನ್ನು, ಅಂದರೆ ಉಳಿತಾಯ ಬ್ಯಾಂಕ್ ಖಾತೆ, ಚಾಲ್ತಿ ಖಾತೆ, ಡ್ರಾಫ್ಟ್ ಖಾತೆ, ಸರ್ಕಾರಿ ಖಾತೆಗಳನ್ನು ಋಣಿಸುತ್ತದೆ. ಪಾವತಿಸದೆ ವಾಪಸು ಮಾಡಲಿರುವ ಚೆಕ್ಕುಗಳ ಮೊತ್ತವನ್ನು ಆ ದಿನದಂದು ತನ್ನ ಆಂತರಿಕ ಖಾತೆಗೆ ಋಣಿಸಿ ಮಾರನೆಯ ದಿನದ ಹೊರಮುಖ ತೀರುವೆಯಲ್ಲಿ ಹಾಜರುಪಡಿಸಬೇಕು.

### ಚೆಕ್ ವಾಪಸಾತಿ

ಬ್ಯಾಂಕುಗಳು ತೀರುವೆಯಲ್ಲಿ ಸ್ವೀಕರಿಸಿದ ಸಂಲೇಖಗಳನ್ನು ಪಾವತಿ ಮಾಡಬೇಕು, ಇಲ್ಲ ಇಪ್ಪತ್ನಾಲ್ಕು ಗಂಟೆಗಳೊಳಗೆ (ಅಂದರೆ ಮಾರನೆಯ ದಿನದ ತೀರುವೆಯಲ್ಲಿ) ಅದನ್ನು ವಾಪಸು ಮಾಡಬೇಕು. ಶಿಲ್ಕಿಗೆ ಸಂಬಂಧಿಸಿದ ಕಾರಣಕ್ಕಾಗಿಯೋ, ತಾಂತ್ರಿಕ ಕಾರಣಕ್ಕಾಗಿಯೋ (ಹಿಂಬರಹ ಮುದ್ರೆ, ತೀರುವೆ ಮುದ್ರೆ ಇಲ್ಲದಿರುವುದು ಇತ್ಯಾದಿ) ವಾಪಸು ಮಾಡುವುದಿದ್ದರೆ ಅದನ್ನು ಚೆಕ್ ವಾಪಸಾತಿ ಜ್ಞಾಪನ ಪತ್ರದೊಂದಿಗೆ ಮಾರನೆಯ ದಿನ ಹೊರಮುಖ ತೀರುವೆ ಚೆಕ್ಕುಗಳೊಂದಿಗೆ ಸಲ್ಲಿಸಬೇಕು. ಇಲ್ಲದಿದ್ದರೆ ಆ ಚೆಕ್ ಪಾವತಿಯಾಗಿದೆಯೆಂದು ಭಾವಿಸಲಾಗುವುದು.

### ಸಮಯ ಪಾಲನೆ

ಸಮಯ ಪಾಲನೆಗೆ ತೀರುವೆ ಮನೆಯಲ್ಲಿ ಅತೀವ ಪ್ರಾಶಸ್ತ್ಯವಿದೆ. ನಿಗದಿಯಾದ ಸಮಯ ಮೀರಿ ತಡವಾಗಿ ಬಂದ ಬ್ಯಾಂಕಿಗೆ ಭಾಗವಹಿಸುವ ಅವಕಾಶವಿರುವುದಿಲ್ಲ. ಆದರೆ ತಮ್ಮ ಮೇಲೆ ಬಂದ ಒಳಮುಖ ತೀರುವೆ ಚೆಕ್ಕುಗಳನ್ನು ಸ್ವೀಕರಿಸಬೇಕು. ಕೆಲವು ಕೇಂದ್ರಗಳಲ್ಲಿ ಪೂರ್ವಾನುಮತಿ ಪಡೆದು ಹತ್ತು ನಿಮಿಷ ತಡವಾಗಿ ಬರುವ ಅವಕಾಶವಿದೆ. ಮತ್ತೆ ಕೆಲವು ಕಡೆ ಒಳಮುಖ ತೀರುವೆ ಚೆಕ್ ಸ್ವೀಕರಿಸಲು ಒತ್ತಾಯ ಮಾಡುವುದಿಲ್ಲ.

### ನಿರ್ವಹಣೆಯ ವೆಚ್ಚಗಳು

ತೀರುವೆ ಮನೆಯ ಉಸ್ತುವಾರಿ ನಡೆಸುವುದು ಒಂದು ನಿರ್ದಿಷ್ಟ ಬ್ಯಾಂಕ್ ಆದರೂ ಅದರ ಫಲ ಎಲ್ಲರಿಗೂ ಸೇರಿದುದು. ಆದುದರಿಂದ ನಿರ್ವಹಣಾ ವೆಚ್ಚಗಳಾದ ಬಾಡಿಗೆ, ಆಸನಾದಿಗಳ ಮೇಲಿನ ಇಳುವರಿ, ನೀರು ವಿದ್ಯುತ್ ಬಿಲ್, ದೂರವಾಣಿ ವೆಚ್ಚ ಮುಂತಾದುವನ್ನು ಎಲ್ಲ ಬ್ಯಾಂಕುಗಳೂ ಸಮನಾಗಿ ಭರಿಸುತ್ತವೆ.

### ತೀರುವೆ ಕಾರ್ಯದಲ್ಲಿನ ಸುಧಾರಣೆಗಳು

ಚೆಕ್ ತೀರುವೆ ಕ್ಷೇತ್ರದಲ್ಲಿ ಇಂದು ಸಂರಚನಾತ್ಮಕ ಸುಧಾರಣೆಗಳನ್ನು ನಾವು ಕಾಣಬಹುದಾಗಿದೆ. ತ್ವರಿತ ಕಾರ್ಯಾಚರಣೆ, ವಿಳಂಬಗಳ ನಿವಾರಣೆ, ಉತ್ತಮ ಗ್ರಾಹಕ ಸೇವೆ ಮುಂತಾದ ಉದ್ದೇಶಗಳನ್ನು ಹೊಂದಿದ ಅನೇಕ ಹೊಸ ಹೊಸ ಯೋಜನೆಗಳನ್ನು ಕೆಲವು ವಿದೇಶೀ ಬ್ಯಾಂಕುಗಳು ಹುಟ್ಟುಹಾಕಿವೆ. ಲಂಡನ್ ನಗರ ಮತ್ತು ಅದರ ಹೊರವಲಯದ ಚೆಕ್ಕುಗಳು ಅಂದಂದೇ ತೀರುವೆಯಾಗಲು ಕ್ಲಿಯರಿಂಗ್ ಹೌಸ್ ಆಟೋಮೇಟೆಡ್ ಪೇಮೆಂಟ್ ಸಿಸ್ಟಮ್ (ತೀರುವೆ ಮನೆ ಸ್ವಯಂಚಲೀಕೃತ ಪಾವತಿ ವ್ಯವಸ್ಥೆ) 1982ರಿಂದ ಲಂಡನ್ನಿನಲ್ಲಿ ಜಾರಿಯಲ್ಲಿದೆ. ಒಬ್ಬ ಗ್ರಾಹಕ ಉದರಿ ಕಾರ್ಡಿನ ಸಹಾಯದಿಂದ ತಾನು ಕೊಂಡ ಸರಕಿಗೆ ವ್ಯಾಪಾರ ಸ್ಥಳದಲ್ಲೇ ತನ್ನ ಬ್ಯಾಂಕ್ ಖಾತೆಯಲ್ಲಿ ಋಣಿಸಿ, ವ್ಯಾಪಾರಿಗೆ ಪಾವತಿ ಮಾಡುವ ಸೌಲಭ್ಯವಿರುವ ಎಲೆಕ್ಟ್ರಾನಿಕ್ ಫಂಡ್ ಟ್ರಾನ್ಸ್‌ಫರ್ ಅಟ್ ದಿ ಪಾಯಿಂಟ್ ಆಫ್ ಸೇಲ್ (ಮಾರಾಟ ಬಿಂದುವಿನಲ್ಲೇ ವಿದ್ಯುನ್ಮಾನ ನಿಧಿ ವರ್ಗಾವಣೆ ವ್ಯವಸ್ಥೆ) ಕೂಡ ಇಂದು ಅನೇಕ ದೇಶಗಳಲ್ಲಿ ಜಾರಿಯಲ್ಲಿದೆ. ಹೀಗೆ ಚೆಕ್ಕುಗಳ ಕಾಗದ ಹಣದಿಂದ ಉದರಿ ಕಾರ್ಡುಗಳ ಪ್ಲಾಸ್ಟಿಕ್ ಹಣಕ್ಕೆ ಪರಿವರ್ತನೆಯಾಗುವ ಕಾಲ ದೂರವಿಲ್ಲ. ಭಾರತದಲ್ಲೂ ತೀರುವೆ ಕಾರ್ಯಕ್ಕೆ ಪ್ರಾಯೋಗಿಕವಾಗಿ ಗಣಕ ಯಂತ್ರಗಳನ್ನು ಬಳಸಲಾಗುತ್ತಿದೆ. ಪರಸ್ಥಳಗಳ ಚೆಕ್ಕುಗಳ ತ್ವರಿತ ಪಾವತಿಗಾಗಿ ರಾಷ್ಟ್ರೀಯ ತೀರುವೆ ಜಾಲವೊಂದನ್ನು ಯೋಜಿಸಲಾಗುತ್ತಿದೆ. ಈ ಎಲ್ಲ ಬೆಳವಣಿಗೆಗಳಿಗೆ ತೀರುವೆ ಮನೆಯ ಪರಿಕಲ್ಪನೆ ಮೂಲಪ್ರೇರಣೆಯಾಗಿದೆ.

ಹೀಗೆ ತೀರುವೆ ಕಾರ್ಯ ಹಣದ ವಹಿವಾಟಿನ ಸಂಪೂರ್ಣ ಹತೋಟಿ ಪಡೆದಿರುವ, ಎಲ್ಲ ಬ್ಯಾಂಕುಗಳ ಸಹಕಾರದಿಂದ ಅದ್ಭುತವನ್ನು ಸಾಧಿಸಬಲ್ಲ ಸಾಧ್ಯತೆ ಇರುವ ಒಂದು ವೇದಿಕೆ.

# ಠೇವಣಿ ಸಂಗ್ರಹಣೆಯ ಆಧಾರ ನಿಯಮಗಳು ಮತ್ತು ನೀತಿಸಂಹಿತೆ

ಬಿ. ಎಸ್. ಚಂದ್ರಶೇಖರ

ಬ್ಯಾಂಕುಗಳ ಪ್ರಮುಖ ಕಾರ್ಯವೆಂದರೆ ಸಾರ್ವಜನಿಕರಿಂದ ಠೇವಣಿಗಳನ್ನು ಸ್ವೀಕರಿಸಿ ಅವುಗಳ ಬಹುಪಾಲನ್ನು ಸಾಲವಾಗಿ ನೀಡುವುದು. ತಾವು ನೀಡುವ ಸಾಲಗಳ ಮೇಲೆ ಪಡೆಯುವ ಬಡ್ಡಿ ಹಾಗೂ ಸಾರ್ವಜನಿಕರ ಠೇವಣಿಗಳಿಗೆ ನೀಡುವ ಬಡ್ಡಿ–ಇವುಗಳ ನಡುವಣ ಅಂತರವೇ ಬ್ಯಾಂಕುಗಳ ಗಳಿಕೆಯ ಪ್ರಮುಖ ಅಂಶ. ಇದನ್ನು ಗಮನಿಸಿದಾಗ ಸಾರ್ವಜನಿಕರಿಂದ ಸಂಗ್ರಹಿಸಲಾದ ಠೇವಣಿಗಳೇ ಬ್ಯಾಂಕುಗಳ ಜೀವಾಧಾರವೆಂಬ ವಿಷಯ ಸ್ಪಷ್ಟವಾಗುತ್ತದೆ. ಠೇವಣಿಯ ಮೊತ್ತ ಹೆಚ್ಚಿದಷ್ಟೂ ಹೆಚ್ಚು ಸಾಲ ನೀಡಲು ಮತ್ತು ತನ್ಮೂಲಕ ಹೆಚ್ಚು ಗಳಿಸಲು ಬ್ಯಾಂಕುಗಳಿಗೆ ಸಾಧ್ಯವಾಗುತ್ತದೆ. ತದ್ವಿರುದ್ಧವಾಗಿ ಠೇವಣಿಯ ಮೊತ್ತ ಕುಸಿದರೆ ಬ್ಯಾಂಕುಗಳ ಗಳಿಕೆಯೂ ಕುಸಿಯುತ್ತದೆ.

ಅತಿ ಸರಳವಾದ—ಆದರೆ ಅತ್ಯಂತ ಮಹತ್ವದ—ಈ ವಿಷಯವನ್ನು ಅರ್ಥಮಾಡಿಕೊಳ್ಳದ ಬ್ಯಾಂಕು ಅಸ್ತಿತ್ವದಲ್ಲಿರಲು ಸಾಧ್ಯವೇ ಇಲ್ಲ. ತಮ್ಮ ಠೇವಣಿಗಳನ್ನು ವೃದ್ಧಿಸಿಕೊಳ್ಳಲು ಎಲ್ಲ ಬ್ಯಾಂಕುಗಳೂ ಅವಿರತವಾಗಿ ಶ್ರಮಿಸಲೇ ಬೇಕಾಗುತ್ತದೆ. ಠೇವಣಿಗಳು ಬ್ಯಾಂಕಿಗೆ ನಡೆದುಬರುವುದಿಲ್ಲವಷ್ಟೆ? ಅವುಗಳನ್ನು ಬ್ಯಾಂಕು ತನ್ನೆಡೆಗೆ ಪ್ರಯತ್ನಪೂರ್ವಕವಾಗಿ ಆಕರ್ಷಿಸಿಕೊಳ್ಳಬೇಕಾಗುತ್ತದೆ; ಸೆಳೆದುಕೊಳ್ಳಬೇಕಾಗುತ್ತದೆ. ಹಣ ಹೂಡಿಕೆಗೆ ಹಲವಾರು ಮಾರ್ಗಗಳಿರುವಾಗ ಎಲ್ಲರೂ ಅದನ್ನು ಬ್ಯಾಂಕುಗಳಲ್ಲಿಯೇ ಹೂಡುವರೆಂದು ನಿರೀಕ್ಷಿಸುವುದು ಯುಕ್ತವಾಗುವುದಿಲ್ಲ. ಒಂದು ವೇಳೆ ಹಾಗೆ ಮಾಡಲು ಹಲವರು ಮುಂದಾದರೆ ಬ್ಯಾಂಕುಗಳ ಸಂಖ್ಯೆಯೇನು ಕಡಮೆಯೇ? ಹೆಚ್ಚಿನ ಸಂಖ್ಯೆಯಲ್ಲಿ ಬ್ಯಾಂಕುಗಳು ತಲೆಯೆತ್ತಿ ನಿಂತಿರುವಾಗ ತಮ್ಮ ಬ್ಯಾಂಕಿಗೇ ಠೇವಣಿ ಬಂದು ಸೇರುವುದೆಂಬ ಪ್ರತೀಕ್ಷೆ ಹುಸಿಯಾಗುವ ಸಾಧ್ಯತೆಯೇ ಹೆಚ್ಚು. ಇಂಥ ಸನ್ನಿವೇಶದಲ್ಲಿ ಬ್ಯಾಂಕುಗಳು ಸಹಜವಾಗಿಯೇ ಠೇವಣಿಗಾಗಿ ಪೈಪೋಟಿ ನಡೆಸುತ್ತವೆ. 1960ರ ದಶಕದ ಅಂತ್ಯದಲ್ಲಿ ಸಹಕಾರಿ ಬ್ಯಾಂಕುಗಳ ಸಂಖ್ಯೆಯೂ ಹೆಚ್ಚಿ, ರಾಷ್ಟ್ರೀಕೃತವಾದ ಬ್ಯಾಂಕುಗಳ ಹರಹು ವಿಶಾಲವಾದಂತೆ ಠೇವಣಿಗಳಿಗಾಗಿ ಪೈಪೋಟಿ ತೀವ್ರವಾಗತೊಡಗಿತು.

ರಿಸರ್ವ್ ಬ್ಯಾಂಕಿನ ಆದೇಶದಂತೆ ಎಲ್ಲ ಬ್ಯಾಂಕುಗಳೂ ನೀಡಬಹುದಾದ ಬಡ್ಡಿ ಒಂದೇ ರೀತಿಯಾಗಿದ್ದರೂ ಆ ಬಗ್ಗೆ ಅಸ್ಪಷ್ಟ ಮಾಹಿತಿ ನೀಡಿ ಠೇವಣಿದಾರರನ್ನು ತಪ್ಪು ದಾರಿಗೆಳೆಯುವ ಪ್ರಯತ್ನಗಳು ಕಂಡುಬಂದುವು. ಹಲವು ಬ್ಯಾಂಕುಗಳು ಜಾಹೀರಾತುಗಳ ಮೂಲಕ ವಿವಿಧ ಆಂಕಿ ಅಂಶಗಳಿಂದ ಸಾರ್ವಜನಿಕರನ್ನು ಮರಳುಮಾಡತೊಡಗಿದುವು. ವಿವಿಧ ಯೋಜನೆಗಳಿಂದ ಠೇವಣಿದಾರರಿಗೆ ದೊರೆಯುವ ಸೌಲಭ್ಯಗಳನ್ನು ಭೂತಗನ್ನಡಿಯಲ್ಲಿ ತೋರಿಸಿ ಆ ಯೋಜನೆಗಳಿಗೆ ಸಂಬಂಧಿಸಿದಂತೆ ಇರಬಹುದಾದ ನಿರುತ್ತೇಜಕ ಅಂಶಗಳನ್ನು ಸಾರ್ವಜನಿಕರ ದೃಷ್ಟಿಯಿಂದ ದೂರವಿರಿಸುವ ಕಾರ್ಯ ನಡೆಯಿತು. ಠೇವಣಿಯ ಮೇಲೆ ಕೊಡುವ ಬಡ್ಡಿಗೆ ಖೋತಾ ಹಾಕಿ ಉಳಿಯುವ ಮೊತ್ತದಲ್ಲಿ 'ಉಡುಗೊರೆ', 'ಬಹುಮಾನ', 'ವಿಮಾನಯಾನ', 'ವಿಶ್ವ ಪರ್ಯಟನ' ಎಂದು ಏನೇನೋ ಆಮಿಷಗಳನ್ನೊಡ್ಡಿ ಸಾರ್ವಜನಿಕರಿಂದ ಠೇವಣಿಗಳನ್ನು ಸಂಗ್ರಹಿಸಲಾಯಿತು. ಅನೇಕ ಸಂದರ್ಭಗಳಲ್ಲಿ ಬಡ್ಡಿ ದರಕ್ಕೆ ಸಂಬಂಧಿಸಿದಂತೆ ರಿಸರ್ವ್ ಬ್ಯಾಂಕಿನ ಆದೇಶಗಳ ಉಲ್ಲಂಘನೆಯೂ ನಡೆಯಿತು. ಹಲವು ಬ್ಯಾಂಕುಗಳು ಸಲ್ಲದ ಆಮಿಷ ತೋರಿಸಿ ಬೇರೆ ಬ್ಯಾಂಕುಗಳ ಠೇವಣಿದಾರರನ್ನು ತಮ್ಮೆಡೆಗೆ ಆಕರ್ಷಿಸತೊಡಗಿದುವು. ಹೊಸ ಠೇವಣಿಗಳನ್ನು ಪಡೆಯಲು ಪ್ರಯತ್ನಿಸದೆ ಇತರ ಬ್ಯಾಂಕುಗಳಲ್ಲಿಟ್ಟ ಠೇವಣಿಗಳನ್ನು ಕಸಿದುಕೊಳ್ಳಲು ಠೇವಣಿದಾರರಿಗೆ ಪ್ರಲೋಭನೆಗಳನ್ನೊಡ್ಡುವುದು ಅತಿಯಾದಾಗ ಹಲವು ಬ್ಯಾಂಕುಗಳು ಗಾಸಿಗೊಂಡವು.

ಠೇವಣಿದಾರರನ್ನು ಕೆಡವಿಕೊಳ್ಳಲು ಬ್ಯಾಂಕುಗಳು ನಡೆಸುತ್ತಿದ್ದ ಮೃಗಯಾವಿನೋದ ಔಚಿತ್ಯದ ಎಲ್ಲೆ ಮೀರಿತು. ತಮ್ಮ ಠೇವಣಿಗಳ ಮೇಲೆ ಸಿಗುವ ಪ್ರತಿಫಲದ ಬಗ್ಗೆ ಠೇವಣಿದಾರರಿಗೆ ಸ್ಪಷ್ಟ ಕಲ್ಪನೆಯಿಲ್ಲದೆ ತೊಂದರೆಯಾದದ್ದಷ್ಟೇ ಅಲ್ಲ; ಠೇವಣಿಗಳಿಗಾಗಿ ನಡೆಯುತ್ತಿದ್ದ ಅನಾ

ರೋಗ್ಯಕರ ಸ್ಪರ್ಧೆಯಿಂದ ಸ್ವತಃ ಬ್ಯಾಂಕುಗಳಿಗೇ ತೊಂದರೆ ಯಾಯಿತು. ಠೇವಣಿ ಕ್ಷೇತ್ರದಲ್ಲಿ ಕಾಡಿನ ಕಾನೂನು ವಿಜೃಂಭಿಸ ತೊಡಗಿತು.

1975ರ ಸುಮಾರಿಗೆ ಈ ವಿಷಯ ಕುರಿತ ಅಸಮಾಧಾನ ಆಕ್ಷೇಪಣೆಗಳಿಗೆ ಮೂರ್ತರೂಪ ಬರತೊಡಗಿತು. ಆ ವೇಳೆ ಗಾಗಲೇ ಭಾರತೀಯ ಬ್ಯಾಂಕರುಗಳ ಸಂಘ ಅಸ್ತಿತ್ವಕ್ಕೆ ಬಂದಿದ್ದು, ತನ್ನ ಚಟುವಟಿಕೆಯನ್ನು ಸಣ್ಣ ಪ್ರಮಾಣದಲ್ಲಿ ಆರಂಭಿಸಿತ್ತು. ಪ್ರಮುಖ ಬ್ಯಾಂಕಿಂಗ್ ಸಮಸ್ಯೆಗಳು ಮತ್ತು ಬ್ಯಾಂಕಿಂಗ್ ನೀತಿಗಳ ಬಗೆಗೆ ಬ್ಯಾಂಕುಗಳಲ್ಲಿ ಏಕಾಭಿ ಪ್ರಾಯ ಮೂಡಿಸುವುದನ್ನು ತನ್ನ ಉದ್ದೇಶಗಳಲ್ಲಿ ಒಂದ ನ್ನಾಗಿಟ್ಟುಕೊಂಡ ಈ ಸಂಸ್ಥೆಯ ಮೂಲಕ ಬ್ಯಾಂಕುಗಳು ಠೇವಣಿ ಕ್ಷೇತ್ರದಲ್ಲಿನ ತಮ್ಮ ಸಮಸ್ಯೆಗೆ ಪರಿಹಾರ ಕಂಡು ಕೊಳ್ಳಲು ಪ್ರಯತ್ನಿಸಿದುವು. ಭಾರತೀಯ ಬ್ಯಾಂಕರುಗಳ ಸಂಘ ಬ್ಯಾಂಕರುಗಳ ಒಂದು ಸಲಹೆಗಾರ ಸೇವಾ ಸಂಸ್ಥೆ. ಇಡೀ ಬ್ಯಾಂಕಿಂಗ್ ಕ್ಷೇತ್ರಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಆಲೋಚಿಸಲು ಬ್ಯಾಂಕುಗಳಿಗೆ ಅದೊಂದು ಸಂಯೋಜಕ ಅಭಿಕರಣ. ಬ್ಯಾಂಕುಗಳಲ್ಲಿ ಸ್ವಯಂಪ್ರೇರಿತ ಶಿಸ್ತು ಮೂಡಿಸುವ ದಿಶೆಯಲ್ಲಿ ಈ ಸಂಸ್ಥೆಯ ಪಾತ್ರ ಮಹತ್ವದ್ದು. ಠೇವಣಿಗಳಿಗಾಗಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಡೆಯುತ್ತಿದ್ದ ಅನಾರೋಗ್ಯಕರ ಹಾಗೂ ಅನಾಗರಿಕ ಪೈಪೋಟಿಯನ್ನು ನಿವಾರಿಸಲು ಇಂಥ ಸಂಸ್ಥೆ ಮುಂದಾ ದದ್ದು ಆಶ್ಚರ್ಯವೇನಲ್ಲ. ಬ್ಯಾಂಕಿಂಗ್ ಕ್ಷೇತ್ರದ ಹಿತ ದೃಷ್ಟಿಯಿಂದ ಠೇವಣಿ ಸಂಗ್ರಹಣೆಗೆ ಸಂಬಂಧಿಸಿದಂತೆ ಆಧಾರ ನಿಯಮಗಳು ಮತ್ತು ನೀತಿಸಂಹಿತೆಯನ್ನು ರೂಪಿಸ ಬೇಕೆಂದು ಭಾರತೀಯ ಬ್ಯಾಂಕರುಗಳ ಸಂಘ ನಿರ್ಧರಿ ಸಿತು.

### ಉದ್ದೇಶ

ಸದಸ್ಯ ಬ್ಯಾಂಕುಗಳ ನಡುವೆ ಠೇವಣಿಗಳಿಗಾಗಿ ಅನಾ ರೋಗ್ಯಕರ ಸ್ಪರ್ಧೆಯನ್ನು ನಿವಾರಿಸುವುದು ಮತ್ತು ತನ್ಮೂಲಕ ಬ್ಯಾಂಕಿಂಗ್ ಕ್ಷೇತ್ರಕ್ಕೆ ನೈಜ ಠೇವಣಿಯ ಹರಿವು ಹೆಚ್ಚುವಂತೆ ಮಾಡಲು ಎಲ್ಲ ಬ್ಯಾಂಕುಗಳ ಪ್ರಯತ್ನವನ್ನು ಒಗ್ಗೂಡಿಸುವುದೇ ಈ ಆಧಾರ ನಿಯಮಗಳು ಮತ್ತು ನೀತಿ ಸಂಹಿತೆಯ ಉದ್ದೇಶ.

1 ಠೇವಣಿ ಯೋಜನೆಯೊಂದರಲ್ಲಿ ಠೇವಣಿದಾರನಿಗೆ ದೊರೆಯಬಹುದಾದ ಅನುಕೂಲಗಳ ನೈಜ ಹಾಗೂ ಸ್ಪಷ್ಟ ಚಿತ್ರವನ್ನು ಠೇವಣಿದಾರನಿಗೆ ನೀಡಬೇಕು.

2 ಠೇವಣಿದಾರನಿಗೆ ವಾಸ್ತವಿಕವಾಗಿ ದೊರೆಯುವ ಬಡ್ಡಿಯ ಸಾಲಿಯಾನ ಶೇಕಡ ದರವನ್ನು ಮತ್ತು ಆತನ ಠೇವಣಿಗೆ ಅನ್ವಯವಾಗುವ ಇತರ ನಿಯಮ ನಿಬಂಧನೆಗಳನ್ನು ಸೂಚಿಸಬೇಕು.

3 ಬಡ್ಡಿದರಗಳನ್ನು ಕುರಿತಂತೆ ಭಾರತೀಯ ರಿಸರ್ವ್ ಬ್ಯಾಂಕಿನ ನಿರ್ದೇಶನಗಳನ್ನು ಅಕ್ಷರಶಃ ಮತ್ತು ತತ್ವಶಃ ಪಾಲಿಸಬೇಕು.

ಬ್ಯಾಂಕುಗಳು ಹೀಗೆ ಮಾಡುತ್ತವೆಂಬುದನ್ನು ಖಚಿತ ಪಡಿಸಿಕೊಳ್ಳುವ ನಿಟ್ಟಿನಲ್ಲಿ ಆಧಾರ ನಿಯಮಗಳು ಮತ್ತು ನೀತಿಸಂಹಿತೆಯನ್ನು ರೂಪಿಸಲಾಗಿದೆ.

### ಸಂಹಿತೆಯ ಸಾರಾಂಶ

ಉಳಿತಾಯ ಠೇವಣಿ ಖಾತೆಗಳು, ಆವರ್ತಕ ಠೇವಣಿ ಖಾತೆಗಳು, ಸ್ಥಿರ ಠೇವಣಿ ಖಾತೆಗಳು, ಬಡ್ಡಿಯ ಲೆಕ್ಕಾಚಾರ ಮತ್ತು ಪಾವತಿ, ಠೇವಣಿದಾರರಿಗೆ ನೀಡುವ ಕೊಡುಗೆ ಮುಂತಾದ ವಿವಿಧ ವಿಷಯಗಳ ಬಗ್ಗೆ ಬ್ಯಾಂಕುಗಳು ಪಾಲಿಸ ಬೇಕಾದ ಅನೇಕ ನಿಯಮಗಳನ್ನು ಸಂಘ ಪಟ್ಟಿಮಾಡಿದೆ. "ಭಾರತೀಯ ಬ್ಯಾಂಕರುಗಳ ಸಂಘದ ಆಧಾರ ನಿಯಮ ಗಳು ಮತ್ತು ನೀತಿಸಂಹಿತೆ" ಎಂದು ಕರೆಯಲಾಗಿರುವುದು ಇದನ್ನೇ. ಇದರ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ವಿವಿಧ ವಿಷಯಗಳನ್ನು ಕುರಿತ ಹಲವು ನಿಯಮಗಳನ್ನು ಈ ಮುಂದೆ ತೋರಿಸಲಾಗಿದೆ.

### 1 ಪರಿಚಯ

ಉಳಿತಾಯ ಠೇವಣಿ, ಚಾಲ್ತಿ ಠೇವಣಿ, ಸ್ಥಿರ ಠೇವಣಿ ಮುಂತಾದ ಎಲ್ಲ ಠೇವಣಿ ಖಾತೆಗಳೂ ಸರಿಯಾದ ಪರಿಚಯ ದೊಂದಿಗೆ ಮಾತ್ರ ತೆರೆಯಲ್ಪಡಬೇಕು.

### 2 ಉಳಿತಾಯ ಖಾತೆಗಳು

ಉಳಿತಾಯ ಠೇವಣಿಯಲ್ಲಿ ಠೇವಣಿದಾರರು ಇಡಬೇಕಾದ ಕನಿಷ್ಠ ಮೊಬಲಗನ್ನು ಸಂಹಿತೆಯಲ್ಲಿ ನಿಗದಿಪಡಿಸಲಾಗಿರು ವುದಲ್ಲದೆ ಇಂಥ ಠೇವಣಿಗಳ ಮೇಲೆ ಬ್ಯಾಂಕುಗಳು ಬಡ್ಡಿಯ ಲೆಕ್ಕಾಚಾರ ಮಾಡಬೇಕಾದ ರೀತಿಯನ್ನು ಸಂಘ ವಿಧಿಸಿದೆ.

ತಿಂಗಳ 10ನೆಯ ಮತ್ತು ಕೊನೆಯ ದಿನ—ಇವುಗಳ ನಡುವಣ ಅವಧಿಯಲ್ಲಿ ಖಾತೆಯಲ್ಲಿರುವ ಕನಿಷ್ಠ ಋಣಿಕೆ ಶಿಲ್ಕಿನ ಮೇಲೆ ಅರ್ಧವಾರ್ಷಿಕ ಅಥವಾ ಇನ್ನೂ ಹೆಚ್ಚಿನ ಅವಧಿಯ ತಡೆಗಳಲ್ಲಿ ಬಡ್ಡಿಯನ್ನು ಲೆಕ್ಕ ಹಾಕಿ ಕೊಡಬೇಕು.

ಉದ್ಯಮ ಅಥವಾ ವ್ಯವಹಾರ ನಡೆಸುವ ಸಂಸ್ಥೆಗಳ ಹೆಸರಿನಲ್ಲಿ ಉಳಿತಾಯ ಖಾತೆಗಳನ್ನು ತೆರೆಯುಬಾರದು. ಆದರೆ ಹಲವು ವಿಶಿಷ್ಟ ವರ್ಗಗಳಿಗೆ ಸೇರಿದ ಸಂಸ್ಥೆಗಳ ಹೆಸರಿನಲ್ಲಿ ಉಳಿತಾಯ ಖಾತೆಗಳನ್ನು ತೆರೆಯಲು ಅವಕಾಶ ವುಂಟು. ಅಂಥ ಸಂಸ್ಥೆಗಳ ಪಟ್ಟಿಯನ್ನು ನೀತಿಸಂಹಿತೆಯಲ್ಲಿ ನೀಡಲಾಗಿದೆ.

### 3 ಠೇವಣಿಗಳು

ಸ್ಥಿರ ಠೇವಣಿ ರಸೀದಿಯ ಮೇಲೆ ಠೇವಣಿ ಮಾಡಲಾದ ಹಣ, ಠೇವಣಿಯ ಅವಧಿ ಮತ್ತು ಪಾವತಿ ಮಾಡಲಾದ

ಬಡ್ಡಿಯ ದರ ಇವುಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಪುನರ್ವಿನಿಯೋಜನ ಯೋಜನೆ, ನಗದು ಪತ್ರ ಮುಂತಾದ ಯೋಜನೆಗಳಲ್ಲಿ ಈ ಅಂಶಗಳ ಜೊತೆಗೆ ಪಕ್ವ ಮೌಲ್ಯ ಮತ್ತು ಬಡ್ಡಿ ಚಕ್ರವಾಗುವ ಅವಧಿಯನ್ನೂ ನಮೂದಿಸ ಬೇಕು. ಆವರ್ತಕ ಠೇವಣಿ ಖಾತೆದಾರರಿಗೆ ನೀಡಲಾಗುವ ಪಾಸ್ ಪುಸ್ತಕಗಳಲ್ಲಿಯೂ ಈ ರೀತಿಯ ನಮೂದುಗಳು ಇರಬೇಕು.

ಸ್ಥಿರ ಠೇವಣಿಗಳ ಮೇಲೆ ತ್ರೈಮಾಸಿಕ ಬಡ್ಡಿ ನೀಡ ಬೇಕು. ಮಾಸಿಕವಾಗಿ ಬಡ್ಡಿ ನೀಡಬೇಕಾದಲ್ಲಿ ಆ ಅವಧಿ ಯಲ್ಲಿ ಸಂಚಿತವಾದ ತ್ರೈಮಾಸಿಕ ಬಡ್ಡಿಯ ಭಾಗ ವನ್ನು ವಟಾಯಿಸಿ ಪಾವತಿ ಮಾಡಬಹುದು. ಈ ಬಗ್ಗೆ ಸಂಘದ ಕೋಷ್ಟಕವನ್ನು ಅನುಸರಿಸತಕ್ಕದ್ದು.

ಹತ್ತು ವರ್ಷಕ್ಕೂ ಮೀರಿದ ಅವಧಿಗಳಿಗೆ ಬ್ಯಾಂಕುಗಳು ಠೇವಣಿಗಳನ್ನು ಸ್ವೀಕರಿಸಬಾರದು.

### 4 ಕೋಷ್ಟಕಗಳು

ಠೇವಣಿ ಯೋಜನೆಗಳಿಗೆ ಸಂಬಂಧಿಸಿದಂತೆ ಪಕ್ವ ಮೌಲ್ಯ, ಮಾಸಿಕ ಆದಾಯ, ಮಾಸಾಶನ ಮುಂತಾದವುಗಳ ವಿವರ ಗಳನ್ನು ತೋರಿಸಲು ಸಂಘ ನಿಗದಿಪಡಿಸಿದ ಕೋಷ್ಟಕಗಳನ್ನು ಬ್ಯಾಂಕುಗಳು ಕಡ್ಡಾಯವಾಗಿ ಬಳಸಬೇಕು. ಯಾವುದೇ ಬ್ಯಾಂಕಿನ ವಿಶೇಷ ಠೇವಣಿ ಯೋಜನೆಯೊಂದಕ್ಕೆ ಸಂಬಂಧಿ ಸಿದ ಹಾಗೆ ಸಂಘದ ಕೋಷ್ಟಕ ಇಲ್ಲದಿದ್ದರೆ ಭಾರತದ ರಿಸರ್ವ್ ಬ್ಯಾಂಕಿನ ನಿರ್ದೇಶನಗಳಿಗೆ ಅನುಗುಣವಾಗಿ ಪಕ್ವ ಮೌಲ್ಯ, ಬಡ್ಡಿ ಮುಂತಾದವನ್ನು ಲೆಕ್ಕ ಹಾಕಬೇಕು.

### 5 ಹೊಸ ಠೇವಣಿ ಯೋಜನೆಗಳು

ಸದಸ್ಯ ಬ್ಯಾಂಕೊಂದು ಹೊಸ ಠೇವಣಿ ಯೋಜನೆ ಯೊಂದನ್ನು ಜಾರಿಗೆ ತರಬಯಸಿದರೆ, ಅದನ್ನು ಸಂಘದ ಗಮನಕ್ಕೆ ತಂದು, ಸಂಘ ಸಮ್ಮತಿಸಿದ ಅನಂತರವೇ ಅದನ್ನು ಜಾರಿಗೊಳಿಸಬೇಕು.

### 6 ಜಾಹೀರಾತುಗಳು

ಬ್ಯಾಂಕುಗಳ ಜಾಹೀರಾತು ಅಥವಾ ಪ್ರಚಾರಸಾಮಗ್ರಿ ಗಳಲ್ಲಿ ಠೇವಣಿಯ ಮೇಲೆ ನೀಡಲಾಗುವ ಬಡ್ಡಿಯ ದರ, ಬಡ್ಡಿ ಲೆಕ್ಕಾಚಾರದ ವಿಧಾನ ಮುಂತಾದವಕ್ಕೆ ಸಂಬಂಧಿಸಿದ ಅಂಕಿಗಳು ಸ್ಪಷ್ಟವಾಗಿರಬೇಕು ಮತ್ತು ಸಂಘ ನಿಗದಿಪಡಿಸಿದ ಕೋಷ್ಟಕಗಳಿಗೆ ಅನುಗುಣವಾಗಿರಬೇಕು. ಆವರ್ತಕ ಠೇವಣಿ, ಪುನರ್ವಿನಿಯೋಜನ ಠೇವಣಿ, ನಗದು ಪತ್ರಗಳು ಮತ್ತು ಇಂಥ ಇತರ ಯೋಜನೆಗಳ ವಿಷಯದಲ್ಲಿ ಬ್ಯಾಂಕುಗಳು—ಅವು ಹಾಗೆ ಬಯಸಿದಲ್ಲಿ—ಠೇವಣಿಗಳು ಗಳಿಸುವ ವಾರ್ಷಿಕ ಇಳುವರಿ ದರವನ್ನು ಸೂಚಿಸಬಹುದು. ಆದರೆ ಅಂಥ ದರದ ಜೊತೆಗೆ ಆ ಯೋಜನೆಯಲ್ಲಿ ನೀಡಲಾಗುವ ಚಕ್ರ ಬಡ್ಡಿಯ ದರವನ್ನು ಕಡ್ಡಾಯವಾಗಿ ಸೂಚಿಸಲೇಬೇಕು.

### 7 ಬಹುಮಾನ, ಕೊಡುಗೆ

ನೀತಿಸಂಹಿತೆಯಲ್ಲಿ ಬಹುಮಾನ, ಕೊಡುಗೆ ಮುಂತಾದ ವನ್ನು ಕುರಿತ ಹಲವು ನಿಯಮಗಳಿವೆ. ಬ್ಯಾಂಕುಗಳು ತಾವು ಪಡೆದ ಠೇವಣಿಗೆ ಪ್ರತಿಯಾಗಿ ಯಾವುದೇ ರೀತಿಯ ಬಹುಮಾನ ಅಥವಾ ಕೊಡುಗೆ ನೀಡಬಾರದು. ಬ್ಯಾಂಕುಗಳು ತಮ್ಮ ಯಾವುದೇ ಠೇವಣಿ ಯೋಜನೆಗೆ ಬಹುಮಾನ, ಕೊಡುಗೆ ಉಡುಗೊರೆ ಮುಂತಾದವುಗಳ ನೀಡಿಕೆಯನ್ನು ತಳಕು ಹಾಕಬಾರದು. ಠೇವಣಿದಾರರಿಗೆ ನೀಡಲಾಗುವ ಬಡ್ಡಿಯ ಹಣದಿಂದ ಅಥವಾ ಚಕ್ರಬಡ್ಡಿ ನೀಡಬೇಕಾದೆಡೆ ಗಳಲ್ಲಿ ಸರಳಬಡ್ಡಿ ನೀಡುವುದರಿಂದ ಉಳಿಯುವ ಮೊಬಲಗಿ ನಿಂದಲೂ ಇಂಥ ಬಹುಮಾನ, ಕೊಡುಗೆಗಳನ್ನು ನೀಡು ವಂತಿಲ್ಲ. ಬ್ಯಾಂಕುಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷ ವಾಗಿ ತಮ್ಮ ಠೇವಣಿದಾರರಿಗೆ ಯಾವುದೇ ರೀತಿಯ ವಿಶೇಷ ಸವಲತ್ತುಗಳನ್ನು ನೀಡುವಂತಿಲ್ಲ.

### 8 ಇತರ

ಸ್ಥಿರ ಠೇವಣಿ, ಆವರ್ತಕ ಠೇವಣಿ, ಪುನರ್ವಿನಿಯೋಜನ ಠೇವಣಿ ಮುಂತಾದ ಠೇವಣಿಗಳನ್ನು ಮೂರು ತಿಂಗಳಿನ ಗುಣಕಗಳ ಅವಧಿಗಳಿಗಾಗಿ ಮಾತ್ರ ಸ್ವೀಕರಿಸಬೇಕು. ಉದಾ : 34 ತಿಂಗಳು, 62 ತಿಂಗಳು 10 ದಿನ—ಇಂಥ ಅವಧಿಗಳಿಗೆ ಈ ಠೇವಣಿಗಳನ್ನು ಸ್ವೀಕರಿಸುವಂತಿಲ್ಲ.

ವಿಮೆಯೊಂದಿಗೆ ಜೊತೆಗೂಡಿಸಲಾದ ಠೇವಣಿ ಯೋಜನೆ ಗಳಲ್ಲಿ ಠೇವಣಿ ಬಡ್ಡಿ ಗಳಿಸಿದ ಮೇಲೆ ವಿಮೆಯ ಕಂತು ಗಳನ್ನು ಪಾವತಿ ಮಾಡಬೇಕು ; ಮೊದಲೇ ಅಲ್ಲಿ ಕಂತಿನ ಹಣವನ್ನು ಕಂಪನಿ ಏರಿಸಿದ ಪಕ್ಷದಲ್ಲಿ ವಿಮೆಯ ಸೌಲಭ್ಯ ಉಳಿಸಿಕೊಳ್ಳಬಯಸುವ ಠೇವಣಿದಾರರು ಹೆಚ್ಚುವರಿ ಹಣ ವನ್ನು ತುಂಬಿಕೊಡಬೇಕು.

ಠೇವಣಿಗಳನ್ನು ಪಡೆಯಲು ಅಥವಾ ಉಳಿಸಿಕೊಳ್ಳಲು ಬ್ಯಾಂಕುಗಳು ದಾನ (ಡೊನೇಷನ್) ಅಥವಾ ಸ್ಮರಣಸಂಚಿಕೆ ಜಾಹೀರಾತುಗಳನ್ನು ನೀಡಬಾರದು.

ಶಾಖೆಯನ್ನು ತೆರೆಯುವ ಸಲುವಾಗಿ ಆವರಣ ಪಡೆಯು ವುದಕ್ಕಾಗಿ ಅಥವಾ ಇರುವ ಆವರಣವನ್ನು ವಿಸ್ತರಿಸಿಕೊಳ್ಳು ವುದಕ್ಕಾಗಿ ಬ್ಯಾಂಕುಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷ ವಾಗಿ ಸಹಾಯಧನ ನೀಡಬಾರದು.

ಠೇವಣಿ ಸಂಗ್ರಹಣೆಗೆ ನೆರವಾದ ವ್ಯಕ್ತಿಗಳಿಗೆ ಅಥವಾ ಅಂಥವರು ಸೂಚಿಸುವ ಇತರರಿಗೆ ಬ್ಯಾಂಕುಗಳು ಉದ್ಯೋಗ ನೀಡಬಾರದು.

ಠೇವಣಿ ಸಂಗ್ರಹಿಸಿದ ಕಾರಣಕ್ಕಾಗಿ ಬ್ಯಾಂಕು ತನ್ನ ಸಿಬ್ಬಂದಿಗೆ ವೈಯಕ್ತಿಕವಾಗಿ ನಗದು ಅಥವಾ ವಸ್ತುವಿನ ರೂಪದಲ್ಲಿ ಕೊಡುಗೆ ನೀಡಬಾರದು.

ಲಾಟರಿ, ಉಡುಗೊರೆ ಯೋಜನೆ ಮುಂತಾದವನ್ನು ನಿರ್ವಹಿಸುವ ಚೀಟಿಹಣ ಸಂಸ್ಥೆಗಳೊಂದಿಗೆ ಬ್ಯಾಂಕುಗಳು ಸಂಪರ್ಕ ಇಟ್ಟುಕೊಳ್ಳಬಾರದು.

ಇವೆಲ್ಲವನ್ನೂ ಹೇಳುವ ಮೊದಲೇ ನೀತಿಸಂಹಿತೆಯಲ್ಲಿ ಬಳಸಲಾಗಿರುವ 'ಸ್ಥಿರ ಠೇವಣಿ', 'ಆವರ್ತಕ ಠೇವಣಿ', 'ಪುನರ್ವಿನಿಯೋಜನ ಠೇವಣಿ', 'ಉಡುಗೊರೆ', 'ಬಹುಮಾನ' ಮುಂತಾದ ಶಬ್ದಗಳನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಒಂದೇ ರೀತಿಯ ಯೋಜನೆ ವಿವಿಧ ಬ್ಯಾಂಕುಗಳಲ್ಲಿ ಬೇರೆಬೇರೆ ಹೆಸರುಗಳಿಂದ ಸೂಚಿಸಲ್ಪಡುವುದರಿಂದ ಈ ಶಬ್ದಗಳನ್ನು ನೀತಿಸಂಹಿತೆಯಲ್ಲಿ ಇಂಥದೇ ಅರ್ಥದಲ್ಲಿ ಬಳಸಲಾಗಿದೆಯೆಂದು ತಿಳಿಸಿರುವುದು ಅತ್ಯಂತ ಸಮಂಜಸವಾಗಿದೆ.

1977ರ ಜನವರಿ 1ರಿಂದ ಈ ನೀತಿಸಂಹಿತೆ ಜಾರಿಗೆ ಬಂದಿದೆ. ನಿರೀಕ್ಷಿಸಿದ್ದಂತೆ ಸದಸ್ಯ ಬ್ಯಾಂಕುಗಳಲ್ಲಿ ಸ್ವಯಂ ಶಿಸ್ತನ್ನು ಮೂಡಿಸಲು ಇದು ನೆರವಾಯಿತೆಂದು ಅನತಿ ಕಾಲದಲ್ಲೇ ವೇದ್ಯವಾಯಿತು. ಬ್ಯಾಂಕುಗಳು ತಮ್ಮ ಠೇವಣಿ ಯೋಜನೆಗಳನ್ನು ಆಧಾರ ನಿಯಮಗಳಿಗೆ ಬದ್ಧವಾಗುವಂತೆ ಪುನರ್ರೂಪಿಸಿಕೊಂಡವು. ಉಡುಗೊರೆ, ಬಹುಮಾನಗಳ ನೀಡಿಕೆಯನ್ನೊಳಗೊಂಡ ಹಲವಾರು ಯೋಜನೆಗಳನ್ನು ಸದಸ್ಯ ಬ್ಯಾಂಕುಗಳು ರದ್ದುಪಡಿಸಿದುವು. ಬ್ಯಾಂಕುಗಳ ಜಾಹೀರಾತುಗಳಲ್ಲಿ ಏಕರೂಪತೆ ಕಂಡುಬಂದು ಠೇವಣಿದಾರನಿಗೆ ಯೋಜನೆಯ ಬಗೆಗಿನ ಸ್ಪಷ್ಟ ಕಲ್ಪನೆ ಮೂಡುವಂತಾಯಿತು.

ಬ್ಯಾಂಕುಗಳು ಠೇವಣಿ ಸಂಗ್ರಹಣೆಗಾಗಿ ನಡೆಸುತ್ತಿದ್ದ ಕೊರಳು ಕೊಯ್ಯುವ ಸ್ಪರ್ಧೆ ತಗ್ಗಿತು. ಇಲ್ಲಸಲ್ಲದ ಆಮಿಷ ತೋರಿ ಒಂದು ಬ್ಯಾಂಕು ಇನ್ನೊಂದು ಬ್ಯಾಂಕಿನ ಠೇವಣಿದಾರರನ್ನು ಸೆಳೆದುಕೊಳ್ಳುವುದು ಕಡಿಮೆಯಾಯಿತು. ಮೇಲಾಗಿ ಸಂಘ ಉದ್ದೇಶಿಸಿದ್ದಂತೆ ನೈಜ ಠೇವಣಿಗಳನ್ನು ಬ್ಯಾಂಕಿಂಗ್ ಕ್ಷೇತ್ರಕ್ಕೆ ಆಕರ್ಷಿಸುವತ್ತ ಬ್ಯಾಂಕುಗಳು ಪ್ರಯತ್ನಿಸುವುದು ಅನಿವಾರ್ಯವಾಯಿತು.

**ಇತಿಮಿತಿಗಳು**

ಆಧಾರ ನಿಯಮಗಳಿಂದ ಇಷ್ಟೆಲ್ಲ ಸಾಧ್ಯವಾಯಿತಾದರೂ ಅದರ ಇತಿಮಿತಿಗಳನ್ನು ಅರ್ಥಮಾಡಿಕೊಳ್ಳಬೇಕಾದುದು ಅಗತ್ಯ. ಏಕೆಂದರೂ ಇದು ಸದಸ್ಯ ಬ್ಯಾಂಕುಗಳು ತಾವೇ ರೂಪಿಸಿ ಒಪ್ಪಿಕೊಂಡ ಒಂದು ನೀತಿಸಂಹಿತೆಯಾದುದರಿಂದ ಇದಕ್ಕೆ ಕಾನೂನಿನ ಸ್ಥಾನವಿಲ್ಲ. ಆಧಾರ ನಿಯಮಗಳನ್ನು ಉಲ್ಲಂಘಿಸಿದ ಸದಸ್ಯ ಬ್ಯಾಂಕುಗಳನ್ನು ದಂಡಿಸುವ ಅಧಿಕಾರ ಸಂಘಕ್ಕಿಲ್ಲ. ಪರಿಸ್ಥಿತಿ ಹೀಗಿರುವುದರಿಂದ ಹಲವೆಡೆಗಳಲ್ಲಿ ಬ್ಯಾಂಕುಗಳು ಆಧಾರನಿಯಮಗಳಿಗೆ ವಿರುದ್ಧವಾಗಿ ನಡೆದುಕೊಂಡಿದ್ದೂ ಉಂಟು. ಈ ವಿಷಯದಲ್ಲಿ ಸಂಸ್ಥೆಯಿಂದ ಹೆಚ್ಚು ನಿರೀಕ್ಷಿಸುವಂತೆ ಇಲ್ಲ. ಅಲ್ಲದೆ ಸಂಘದ ಸದಸ್ಯತ್ವ ಹೊಂದಿರುವ ಬ್ಯಾಂಕುಗಳಿಗೆ ಮಾತ್ರ ಇದು ಅನ್ವಯವಾಗುವುದರಿಂದ ಇತರ ಬ್ಯಾಂಕುಗಳು ಇದಕ್ಕೆ ಬದ್ಧವಾಗಿರಬೇಕೆಂದು ನಿರೀಕ್ಷಿಸುವುದು ತಪ್ಪಾಗುತ್ತದೆ.

ಆದರೆ ಸಂಘ ಆಧಾರ ನಿಯಮಗಳನ್ನು ರೂಪಿಸಿ, ಕಣ್ಮುಚ್ಚಿ ಕುಳಿತುಕೊಂಡಿದೆ ಎನ್ನುವ ಮಾತು ಸತ್ಯಕ್ಕೆ ದೂರವಾದುದು. ಆಧಾರ ನಿಯಮಗಳು ಮತ್ತು ನೀತಿಸಂಹಿತೆಯನ್ನು ಬ್ಯಾಂಕುಗಳು ಅಕ್ಷರಶಃ ಮತ್ತು ತತ್ವಶಃ ಪಾಲಿಸುವುದನ್ನು ಖಾತರಿಪಡಿಸಿಕೊಳ್ಳಲು ಸಂಘ ಒಂದು 'ನೀತಿಸಂಹಿತೆ ಸಮಿತಿ'ಯನ್ನು ರಚಿಸಿದೆ. ಸದಸ್ಯ ಬ್ಯಾಂಕುಗಳು ಆಧಾರನಿಯಮಗಳನ್ನು ಉಲ್ಲಂಘಿಸಿದ ಬಗ್ಗೆ ತಮಗೆ ಬಂದ ದೂರುಗಳನ್ನು ಪರಿಶೀಲಿಸಿ ಯುಕ್ತ ಕ್ರಮ ಕೈಗೊಳ್ಳಲು ಈ ಸಮಿತಿಗೆ ಅಧಿಕಾರ ನೀಡಲಾಗಿದೆ.

ಒಂದು ಸದಸ್ಯ ಬ್ಯಾಂಕು ಆಧಾರ ನಿಯಮಗಳನ್ನು ಉಲ್ಲಂಘಿಸಿತೆಂಬ ನೆಪದಿಂದ ಇನ್ನೊಂದು ಸದಸ್ಯ ಬ್ಯಾಂಕೂ ಅವನ್ನು ಉಲ್ಲಂಘಿಸಬಾರದು. ಬದಲಾಗಿ ಇತರ ಬ್ಯಾಂಕುಗಳಿಂದ ಅಂಥ ಉಲ್ಲಂಘನೆ ಆದಾಗ ತಮ್ಮ ಕೇಂದ್ರ ಕಛೇರಿಗೆ ಆ ಬಗ್ಗೆ ತಿಳಿಸಬೇಕೆಂದು ಬ್ಯಾಂಕುಗಳು ತಮ್ಮ ಶಾಖಾ ವ್ಯವಸ್ಥಾಪಕರುಗಳಿಗೆ ಮತ್ತು ಇತರ ಅಧಿಕಾರಿಗಳಿಗೆ ತಿಳಿಸಬೇಕು. ಆಗ ಕೇಂದ್ರ ಕಛೇರಿ ಆ ವಿಷಯವನ್ನು ಸಂಘದೊಂದಿಗೆ ಚರ್ಚಿಸಲು ಅನುಕೂಲವಾಗುತ್ತದೆ. ಈ ಉದ್ದೇಶಕ್ಕಾಗಿ ಪ್ರತಿಯೊಂದು ಸದಸ್ಯ ಬ್ಯಾಂಕೂ ಒಬ್ಬೊಬ್ಬ ಅಧಿಕಾರಿಯನ್ನು ನಿರ್ದೇಶಿಸಿದ್ದು, ಆ ಅಧಿಕಾರಿ ಇಂಥ ವಿಷಯಗಳಲ್ಲಿ ಬ್ಯಾಂಕಿನ ಶಾಖೆಗಳ ಮತ್ತು ಸಂಘದ ನಡುವೆ ಸಂಪರ್ಕ ಕಲ್ಪಿಸುತ್ತಾನೆ. ಉಲ್ಲಂಘನೆಯ ಬಗ್ಗೆ ದೂರು ಕೊಡುವ ಬ್ಯಾಂಕಿನ ನಿರ್ದೇಶಿತ ಅಧಿಕಾರಿಯ ಮೂಲಕ ಸ್ವೀಕರಿಸಿದ ದೂರನ್ನು ಸಂಬಂಧಿಸಿದ ಬ್ಯಾಂಕಿನ ನಿರ್ದೇಶಿತ ಅಧಿಕಾರಿಯ ಗಮನಕ್ಕೆ ತರಲಾಗುವುದು.

ಇಷ್ಟು ಮಾಡಿದ ಮೇಲೆ ಇನ್ನುಳಿದ ಜವಾಬ್ದಾರಿ ಬ್ಯಾಂಕುಗಳದೇ. ಭಾರತೀಯ ಬ್ಯಾಂಕರುಗಳ ಸಂಘ ತನ್ನ ಸದಸ್ಯ ಬ್ಯಾಂಕುಗಳಿಂದ ಪ್ರಬುದ್ಧ ವರ್ತನೆಯನ್ನು ನಿರೀಕ್ಷಿಸುತ್ತದೆ.

ಬ್ಯಾಂಕುಗಳ ವ್ಯವಹಾರಕ್ಕೆ ಮೂಲಾಧಾರವಾದ ಠೇವಣಿ ಸಂಗ್ರಹಣೆಯಲ್ಲಿನ ತೀವ್ರವಾದ ಸಮಸ್ಯೆಯೊಂದನ್ನು ನಿವಾರಿಸುವ ದಿಶೆಯಲ್ಲಿ 'ಆಧಾರ ನಿಯಮಗಳು ಮತ್ತು ನೀತಿಸಂಹಿತೆ' ಒಂದು ಪ್ರಾಮಾಣಿಕ ಪ್ರಯತ್ನ. ಬ್ಯಾಂಕುಗಳಿಗೆ ನೈಜ ಠೇವಣಿಗಳನ್ನು ಆಕರ್ಷಿಸಿ ತನ್ಮೂಲಕ ಒಟ್ಟಾರೆ ಬ್ಯಾಂಕಿಂಗ್ ಕ್ಷೇತ್ರದ ಬೆಳವಣಿಗೆಯನ್ನು ಸಾಧಿಸುವ ಉದ್ದೇಶವುಳ್ಳ ಈ ಪ್ರಯತ್ನ ಭಾರತದ ಬ್ಯಾಂಕರುಗಳ ಸಂಘದ ಧೀಮಂತಿಕೆಯ ದ್ಯೋತಕವಾಗಿದೆ.

ಒಂದು ಹಾಸ್ಯ ಚಿತ್ರ

# ಬೆನ್ನಿಗೆ ಬಿದ್ದವರು

ಎಚ್. ಎಸ್. ಕೃಷ್ಣ

**ನಮ್ಮ ಬಹುತೇಕ ಬ್ಯಾಂಕುಗಳು ಸರ್ಕಾರದ ಸಂಪೂರ್ಣ ಒಡೆತನಕ್ಕೆ ಸೇರಿದ್ದರೂ ಅವುಗಳ ನಡುವೆ ಸ್ಪರ್ಧೆ ಅನಿವಾರ್ಯ. ಅದರ ಪರಿಣಾಮ...**

ಪೇಪರ್ ಬರುವುದಕ್ಕೂ ಮುಂಚೆ ನಮಗೆ ಸಮಾಚಾರ ತಿಳಿಯುವುದು ನಮ್ಮನೆ ಕೆಲ್ಸಕ್ಕೆ ಬರುವ ಗಂಗಮ್ಮನಿಂದ. ಅವಳು ಹೇಳುವ ಅನೇಕ ಅಂಶಗಳನ್ನು 'ಕಥಾ ವಿಭಾಗಕ್ಕೆ' ಹಾಕಬಹುದಾದರೂ ಅವುಗಳಲ್ಲಿ ಕೆಲವು ಸುದ್ದಿಗಳು ಇದ್ದೇ ಇರುತ್ತದೆ. ಅದಕ್ಕೇ ಅವಳು ಬರುತ್ತಿದ್ದಂತೆಯೇ "ಏನವ್ವ ಸಮಾಚಾರ ?" ಅಂತ ನಾನು ಪ್ರತಿನಿತ್ಯ ವಿಚಾರಿಸುವುದು. ಈ ಗಂಗವ್ವನ ಸಹಾಯದಿಂದ ನನಗೆ ನನ್ನ ಉದ್ಯೋಗದಲ್ಲಿ ಒಂದು ಬಡ್ತಿ ಸಿಕ್ಕಿತೆಂದು ಹೇಳಿದರೆ ನೀವು ಖಂಡಿತ ನಂಬುವುದಿಲ್ಲ. ನಡೆದ ಸಂಗತಿಯನ್ನಿಲ್ಲಿ ವಿಸ್ತಾರವಾಗಿ ವಿವರಿಸುತ್ತೇನೆ. ಕೇಳಿ, ಅಲ್ಲ—ಓದಿ.

"ಬುದ್ಧಿ, ಇದೇ ಆರನೇ ಮೇನ್ ರಸ್ತೇಲಿ ಇದ್ಯಲ್ಲಾ, ನಾಲ್ಕನೇ ಮನೆ, ಅಲ್ಲಿ ನಿನ್ನೆ ರಾತ್ರಿ ಎಷ್ಟೊಂದು ಜನ ಬಂದು ಹೋಗ್ತಿದ್ದರು, ಯಾಪಾಟಿ ಕಾರು ಸ್ಕೂಟರಗಳು, ಅವರ ಮನೆ ಮುಂದೆ."

"ಆ ಮನೇಲಿರುವವರು ಯಾರೋ ದೊಡ್ಡಮನುಷ್ಯರಿರ ಬೇಕು, ಏನೋ ಸಮಾರಂಭ ಇರಬೇಕು. ಅದೇನ್ ದೊಡ್ಡ ವಿಷಯ ?" ಎಂದೆ.

"ಅಲ್ಲಾ ಬುದ್ಧಿ, ನಾನ್ ಹೇಳ್ತಿರೋ ಆ ಮನೆ ಹಿಂದ್ಗಡೆ ಪಕ್ಕಲಿರುವ ಮನೆಯವರ ವಿಚಾರ. ಆ ಮನೆ ನಮ್ಮ ಹಟ್ಟಿ ಇಲ್ವಾ ಅದಕ್ಕಿಂತ ಚಿಕ್ಕದು. ಅಲ್ಲಿರುವವ ಅದೇ ಲೈಬ್ರರಿ ಯಲ್ಲಿ ಬೈಂಡ್ ಹಾಕುವವ. ಅವನ ಮನೆಗೆ ಆಪಾಟಿ ಕಾರು ಸ್ಕೂಟರು ? ಅಲ್ಲದೆ ಅವನು ನಿನ್ನೆ ರಾತ್ರಿ ಮನೆಗೆ ಬರಲಿಲ್ಲ ವಂತೆ" ಎಂದಳು ಗಂಗಮ್ಮ.

ಮೊನ್ನೆ ತಾನೆ ಆರನೇ ಮೇನ್‌ನಲ್ಲಿ ಒಂದು ಕೊಲೆ ಆಯ್ತು.ಈಗ ಇನ್ನೇನು ನಡಿದಿದ್ಯೋ ಅಥವಾ ಆ ಕೊಲೆಗೂ ಈ ಕಾಣೆಯಾದ ಮನುಷ್ಯನಿಗೂ ಏನಾದರೂ ಸಂಬಂಧ ಇದ್ಯೋ ? ನೋಡೋಣ ಅಂತ ಮನೆಯಿಂದ ಹೊರಟೆ.

ಸಧ್ಯ ಹೆಚ್ಚು ಗದ್ದಲವಿರಲಿಲ್ಲ. ಸೀದಾ ಮನೆಯೊಳಗೆ ಹೋದೆ. ಮನೆಯ ಹೆಂಗಸು ಗಾಬರಿಯಾಗಿದ್ದಂತೆ ಕಂಡಿತು. ವಿಷಯ ಕೇಳಿದೆ. ಮನಸ್ಸಿನಲ್ಲೇ ಗಂಗಮ್ಮನಿಗೆ ಧನ್ಯವಾದ ಗಳನ್ನು ಅರ್ಪಿಸಿದೆ. "ನಿಮ್ಮ ಪಕ್ಕದಲ್ಲಿ ನಿಂತಿದ್ದಾರಲ್ಲ ಅವರೇನೆ ?" ಪ್ರಶ್ನಿಸಿದೆ.

"ಏನ್‌ಸ್ವಾಮಿ ಹೀಗೆ ಕೇಳ್ತೀರಲ್ಲಾ ? ನಾ ಇನ್ಯಾರ ಒಟ್ಟಿಗೆ ನಿಂತು ಫೋಟೊ ತೆಗಿಸ್ತೀನಿ ?" ಅಂದಾಗ ಕಸಿವಿಸಿಯಾಯ್ತು.

"ನಿಮ್ಮ ಯಜಮಾನ್ರು ಎಲ್ಲಿ ಕೆಲ್ಸ ಮಾಡ್ತಾರೆ ?"

"ಅದೇ ಪುಸ್ತಕಗಳೆಲ್ಲಾ ಕೊಡ್ತಾರಲ್ಲ ಅಲ್ಲಿ."

"ಗೊತ್ತಾಯ್ತು. ಪಬ್ಲಿಕ್ ಲೈಬ್ರರೀಲಿ."

"ನೀವು ಮಂತ್ರಾಲಯಕ್ಕೆ ಯಜಮಾನರ ಜೊತೆ ಹೋಗಿದ್ರಾ ?"

"ಹೌದು, ಅದೇ ಒಂದು ಹರಕೆಯಿತ್ತು. ಅದಕ್ಕೆ ಹೋಗಿದ್ದು."

"ಇದು ನಡೆದದ್ದು ಯಾವಾಗ ?"

"ಬೇಸ್ತವಾರ ಬುದ್ಧಿ."

"ಯಜಮಾನರು ನಿನ್ನೆ ರಾತ್ರಿ ಮನೆಗೆ ಬರದೇ ಇದ್ದುದ ಕ್ಕಾಗಿ ಪೋಲಿಸ್ ಕಂಪ್ಲೇಂಟ್ ಕೊಟ್ರಾ ?"

"ಇಲ್ಲ,ಇನ್ನೂ ಕೊಟ್ಟಿಲ್ಲ. ಆದರೆ ಈಗ ಹೆದರಿಕೆ ಆಗ್ತದೆ !"

"ಒಳ್ಳೇದಾಯ್ತು ಬಿಡಿ, ನೋಡಿ. ನೀವು ಹೆದರಬೇಡಿ. ನಿಮ್ಮ ಯಜಮಾನರನ್ನ ನಾನು ಹುಡುಕುತ್ತೇನೆ. ಆದರೆ ಎರಡು ದಿನ ಟೈಂ ಕೊಡಿ. ಪೋಲಿಸ್‌ಗೆ ತಿಳಿಸಿದರೆ ಇಲ್ಲದ ಪ್ರಚಾರ."

"ಏನೋ ಸ್ವಾಮಿ, ಬಹಳ ಜನ ಮನೆಗೆ ಬಂದು ವಿಚಾರಿಸಿ ಕೊಳ್ಳುತ್ತಿರುವುದನ್ನು ನೋಡಿದರೆ ಭಯ ಆಗ್ತದೆ. ಅವರಿ ಗೆಲ್ಲಾ ಉತ್ತರ ಹೇಳುವುದು ಕಷ್ಟವಾಗ್ತದೆ. ತವರುಮನೆಗೆ ಓಡಿ ಹೋಗುವ ಎಂದರೆ, ಮನೆಗೆ ಬೀಗ ಹಾಕಿದರೆ ಅವರು ಬಂದಾಗ ಕಷ್ಟವಾಗುತ್ತೆ ಅಂತಾ ಇಲ್ಲೆ ಉಳಿದಿದ್ದೇನೆ" ಎಂದಳು.

ನಾನು ಜಯಶಾಲಿಯಾಗುತ್ತೇನೆ ಎಂಬ ಆತ್ಮವಿಶ್ವಾಸದಿಂದ ಅವನನ್ನು ಹಿಡಿಯುವುದಾಗಿ ಆಶ್ವಾಸನೆ ನೀಡಿ ಹೊರಟೆ. ರಾಯರ ಭಕ್ತನೆಂದು ತಿಳಿದು 12ನೇ ಕ್ರಾಸಿನಲ್ಲಿರುವ ರಾಯರ ಮಠಕ್ಕೆ ಹೋಗಿ ಹಿಂದಿನ ದಿನ ವಿಶೇಷ ಪೂಜೆಮಾಡಿಸಿದವರ ಪಟ್ಟಿಯನ್ನು ಪರಿಶೀಲಿಸಿದೆ. ಅಲ್ಲಿ ಸಿದ್ದಪ್ಪನ ಹೆಸರಿತ್ತು. ನನ್ನ ಊಹೆ ನಿಜವಾಯ್ತು. ಊರು ಬಿಡಲು ನಿರ್ಧರಿಸಿ ಮನೆಗೆ ನುಗ್ಗಿ ನನ್ನ ಯೋಜನೆಯ ಸೂಕ್ಷ್ಮ ಎಳೆಯನ್ನು ಪತ್ನಿಯೆದುರು ಬಿಡಿಸಿದೆ.

"ನಿಮಗೆಲ್ಲೊ ಹುಚ್ಚು. ಸುಮ್ಮನೆ ಶ್ರಮ ಹಾಗೂ ಖರ್ಚು. ಹೋಗಲಿ, ನನ್ನೂ ಕರೆದುಕೊಂಡು ಹೋಗಿ. ರಾಯರ ದರ್ಶನವಾಗುತ್ತೆ" ಅಂದಳು."ಅಲ್ವೆ, ಹೋಗುವಾಗ ನಾನೂ ಬರ್ತ್ನೇನೆ ಅಂತಾ ಅಪಶಕುನ ನುಡಿಬೇಡ್ವೆ. ಈ ಕೆಲ್ಸ ಕೈಗೂಡಿದರೆ ಮತ್ತೆ ಹೋಗೋಣ" ಎಂದು ಸಮಾಧಾನ ಪಡಿಸಿ ಮಗನನ್ನು ಆಫೀಸಿಗೆ ಕಳುಹಿಸಿ, ಎರಡು ದಿನ ಬರುವುದಕ್ಕೆ ಆಗುವುದಿಲ್ಲ ಅಂತ ಅಕೌಂಟೆಂಟ್ ಕೃಷ್ಣಮೂರ್ತಿಗೆ ತಿಳಿಸುವುದಕ್ಕೆ ಹೇಳಿ, "ನೀನು ಒಂದುಸಾರಿ ಫೋನು ಮಾಡಿ ಬಿಡು ; ಅರ್ಜೆಂಟ್ ಕೆಲ್ಸದ ಮೇಲೆ ಹೋಗಲೇಬೇಕಾಯಿತು ಅಂತ ತಿಳಿಸಿಬಿಡು" ಎಂದು ಆದೇಶ ನೀಡಿ ಮನೆಯಿಂದ ಕಳಚಿಕೊಂಡೆ.

ಬಸ್ಸಿನಲ್ಲಿ ನನ್ನಂತೆ ಸಿದ್ದಪ್ಪನನ್ನು ಹಿಡಿಯಲು ಯಾರಾದರೂ ಇದ್ದಾರೆಯೇ ಎಂದು ಸೂಕ್ಷ್ಮವಾಗಿ ಗಮನಿಸಿದೆ. ಯಾರೂ ಇರಲಿಲ್ಲ. ಒಂದು ವೇಳೆ ಸಿದ್ದಪ್ಪನೇ ಇದ್ದರೆ, ಅಂತ ಕೈಯಲ್ಲಿದ್ದ ಫೋಟೋದ ಸಹಾಯದಿಂದ ನೋಡಿದೆ. ಯಾರೂ ಕಾಣಲಿಲ್ಲ.

ಮಂತ್ರಾಲಯದಲ್ಲಿ ಇಳಿದು ದೇವಸ್ಥಾನಕ್ಕೆ ಹೋಗುತ್ತಿದ್ದಂತೆ, ತುಂಗಾನದಿಯಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿ ನಮಸ್ಕಾರ ಹಾಕಲು ಬರುತ್ತಿರುವ ಪ್ರತಿಯೊಬ್ಬರೂ ನನ್ನ ಕಣ್ಣಿಗೆ ಸಿದ್ದಪ್ಪನ ಹಾಗೆ ಕಾಣತೊಡಗಿದರು. ಸಿದ್ದಪ್ಪನನ್ನು ಆದಷ್ಟು ಬೇಗ ಗುರುತಿಸುವ ಶಕ್ತಿ ಕೊಡೆಂದು ರಾಯರಲ್ಲಿ ಬೇಡಿಕೊಂಡೆ. ಆತುರದ ಕೆಲಸಗಳೆಲ್ಲ ಹಾಳು. ಸ್ವಲ್ಪ ನಿಧಾನವಾಗಿ ನನ್ನ ಬಲೆಯುನ್ನು ಹೆಣೆಯಬೇಕೆಂದು ಹಾಗೇ ಕುಳಿತೆ. ಕಾಲೇಜಿನಲ್ಲಿ ಸೈಕಾಲಜಿ ಓದಿದ ಮಾತ್ರಕ್ಕೆ ನನಗೆ ಜನರ ನಡವಳಿಕೆಯಿಂದ ಇವರು ಇಂತಾವರೇ ಅಂತ ಕಂಡು ಹಿಡಿಯಲಾಗುವುದಿಲ್ಲ ಎಂದು ಈಗ ಮನವರಿಕೆ ಆಯ್ತು. ಆದರೆ ಪ್ರಯತ್ನಪಟ್ಟರೆ ಖಂಡಿತ ಸಾಧ್ಯ ಎನಿಸಿತು.

ಮುಕ್ಕಾಲು ಭಾಗ ಆ ವ್ಯಕ್ತಿಯೇ ಸಿದ್ದಪ್ಪನಿರಬೇಕೆಂದು ಅರ್ಚನೆ ಮಾಡಿಸುವ ಆತುರದಲ್ಲಿರುವ ಜನರ ಮಧ್ಯೆ ನುಸುಳಿದೆ. ಸಿದ್ದಪ್ಪನ ಹೆಸರನ್ನು ಅರ್ಚಕ ಕರೆದಾಗ ಸಿದ್ದಪ್ಪನ ಬೆನ್ನಿಗೆ ಬಿದ್ದೆ ನಾನು.

ಪ್ರಾಕಾರದಲ್ಲಿ ಸಿದ್ದಪ್ಪನವರು ಏನೋ ಯೋಚಿಸುತ್ತ ಕುಳಿತಾಗ ಸಮಯ ಸಾಧಿಸಿ ಅವರ ಪಕ್ಕಕ್ಕೆ ಕುಳಿತು ನನ್ನಷ್ಟಕ್ಕೆ ನಾನು "ಹಾಳು ಹಣ. ಅದು ಇಲ್ಲದಿದ್ದರೂ ಚಿಂತೆ, ಬಂದರೂ ಚಿಂತೆ" ಎಂದೆ.

"ನೀವು ಸರಿಯಾಗಿ ಹೇಳಿದಿರಿ" ಅಂತ ಸಿದ್ದಪ್ಪ ದನಿಗೂಡಿಸಿದಾಗ ನನ್ನ ಊಹೆ ನಿಜವಾಯ್ತು. ಮುಂದುವರಿಸಿದೆ : "ನಿಮ್ಮನ್ನ ಎಲ್ಲೋ ನೋಡಿದ್ದೀನಲ್ಲಾ, ಮೈಸೂರಿನಲ್ಲಿ ಇದ್ದಿರಾ ?" ಕೇಳಿದೆ.

ಬೃಂದಾವನದ ಮುಂದೆ ಸುಳ್ಳು ಹೇಳಲಾಗದೆ "ಹೌದು" ಎಂದು ಒಪ್ಪಿಕೊಂಡರು.

"ಒಂಟಿಕೊಪ್ಪಲಿನಲ್ಲಿ, ಅಲ್ಲವಾ ?"

"ಹೌದು, ನೀವು ?"

"ಹಾಗ್ ಹೇಳಿ, ಅದಕ್ಕೇ ನಾನು ಅಷ್ಟು ಸಾರಿ ನಿಮ್ಮನ್ನು ನೋಡಿದ ನೆನಪು. ಅದ್ಸರಿ ನಿಮ್ಮನ್ನ ನಾನು ಪಬ್ಲಿಕ್ ಲೈಬ್ರರೀಲಿ ನೋಡಿದೀನಿ" ಅಂತ ಕೇಳಿದಾಗ ನಾನು ಪೋಲಿಸ್ ಇಲಾಖೆಯವನು ಅಂತ ಸಿದ್ದಪ್ಪನಿಗೆ ಅನುಮಾನವಾಗಿರಬೇಕು. ಇಷ್ಟೊಂದು ಪ್ರಶ್ನೆಗಳನ್ನು ಕೇಳಿದರೆ ಆತ ಓಡಿಹೋಗಬಹುದೆಂದು ಅಲ್ಲಿಗೆ ಮಾತು ನಿಲ್ಲಿಸಿದೆ.

ಬಹಳ ಹೊತ್ತು ರಾಯರ ಧ್ಯಾನದಲ್ಲಿದ್ದ ಸಿದ್ದಪ್ಪ ಅಲ್ಲೇ ಕುಳಿತಿರುವುದನ್ನು ನೋಡಿ "ನೀವು ನನ್ನ ಹಾಗೆ ಹೇಳದೆ ಕೇಳದೆ ಮನೆಯಿಂದ ಓಡಿಬಂದಹಾಗಿದೆ. ಏನ್ ಸಮಾಚಾರ ?" ಎಂದು ಕೇಳಿದೆ.

"ನೀವು ಪೋಲಿಸ್‌ನವರಿರಬೇಕು ?"

"ಇಲ್ಲ, ಖಂಡಿತಾ ಇಲ್ಲ. ಯಾವುದೋ ಹಣದ ಬಗ್ಗೆ ತಲೆಕೆಡಿಸಿಕೊಂಡು ಇಲ್ಲಿ ಬಂದಿದ್ದೇನೆ. ನಿಮ್ಮ ಮುಖ ನೋಡಿ ಹಾಗೆ ಹೇಳಿದೆ. ನನ್ನನ್ನು ನಂಬಿ." ಮಠದಲ್ಲಿ ಮಾತನಾಡುವುದು ಬೇಡವೆಂದು ನದೀತೀರಕ್ಕೆ ಬಂದು ಬಂಡೆಯ ಮೇಲೆ ಕುಳಿತೆವು. ಸಿದ್ದಪ್ಪನವರು ವಿಷಯವನ್ನು ವಿವರವಾಗಿ ಹೇಳಿದರು.

"ಇಷ್ಟಕ್ಕೆ ನೀವು ಯಾಕೆ ಹೀಗೆ ಒದ್ದಾಡಬೇಕು ? ಹಣ ಬಂದಿದೆ ಎಂದಮೇಲೆ ಇವೆಲ್ಲಾ ಸಾಮಾನ್ಯ."

"ಆದರೆ ಅಷ್ಟೊಂದು ಜನ ನನಗೆ ವಿಷಯ ತಿಳಿಯುತ್ತಿದ್ದಂತೆ ಮನೆಗೆ ಬರುವುದಕ್ಕೆ ಶುರು ಮಾಡಿದರು. ಅವರ ಮುತ್ತಿಗೆಯ ಭಯದಿಂದ ಇಲ್ಲಿಗೆ ಓಡಿಬಂದೆ. ನನಗೆ ತಿಳಿದು ಮನೆಗೆ ಬರುತ್ತಿದ್ದಂತೆ ನಾಲ್ಕು ಬ್ಯಾಂಕು ಮ್ಯಾನೇಜರುಗಳು ಬಂದು ಹೋಗಿದ್ವರಂತೆ. ಇವರಲ್ಲದೆ ನನಗೆ ಮನೆ ಕೊಡ್ಸೋಕೆ ದಲ್ಲಾಳಿಗಳು, ಯೂನಿಟ್ ಟ್ರಸ್ಟ್ ಏಜೆಂಟರುಗಳು, ಹೀಗೆ ಅನೇಕ ಮಂದಿ. ನನಗೆ ಅವರನ್ನೆಲ್ಲಾ ಎದುರಿಸಲು ಸಾಧ್ಯವಾಗದೆ ಇಲ್ಲಿಗೆ ಓಡಿ ಬಂದೆ. ಅದೂ ಅಲ್ಲದೆ, ಹೋದ ವಾರ ನಾನು ಇದೇ ಸ್ಥಳದಲ್ಲಿ ತೆಗೆದುಕೊಂಡ ಟಿಕೆಟ್‌ಗೆ ತಾನೇ 30 ಲಕ್ಷ ಬಂದಿರುವುದು ? ಅದಕ್ಕೆ ರಾಯರಿಗೆ ನಮಸ್ಕಾರ ಹಾಕಿ ಆಶೀರ್ವಾದ ಪಡೆಯೋಣ ಅಂತ ಬಂದೆ."

"ಒಳ್ಳೆ ಕೆಲ್ಸ ಮಾಡಿದ್ರಿ" ಎಂದೆ. ಬ್ಯಾಂಕ್ ಮ್ಯಾನೇಜರ್ ಹಾಗೂ ಇತರ ಏಜೆಂಟ್‌ಗಳನ್ನು ಅಷ್ಟು ಬೈದಿರಬೇಕಾದರೆ, ನಾನೂ ಸಹ ಒಬ್ಬ ಬ್ಯಾಂಕ್ ಮ್ಯಾನೇಜರ್ ಅಂತ ಹೇಳಿ

ಕೊಳ್ಳಲು ಧೈರ್ಯ ಸಾಲದಾಯಿತು. ಮನಸ್ಸಿನಲ್ಲೇ ಒಂದು ಯೋಜನೆ ರೂಪಿಸಿದೆ.

"ನೀವು ಯಾವ ನಿರ್ಧಾರವನ್ನೂ ಕೈಗೊಳ್ಳದಿದ್ದರೆ ಒಂದು ಕೆಲಸ ಮಾಡಿ, ಇಲ್ಲಿರುವ ಸ್ವಾಮಿಗಳ ಸಲಹೆ ಕೇಳಿ, ಅವರು ಹೇಗೆ ಹೇಳ್ತಾರೋ ಹಾಗೆ ಮಾಡಿ" ಎಂದೆ.

"ಹೌದು ಹಾಗೆ ಮಾಡುವುದು ಸೂಕ್ತ" ಎಂದ.

ಒಂದು ನಿಮಿಷ, ಬಂದೆ ಎಂದು ಆತುರದಿಂದ ಸಿದ್ದಪ್ಪ ನಿಂದ ದೂರಾದೆ. ಮಂತ್ರಾಲಯದಿಂದ ಹೊರಟ ಬಸ್ಸಿನಲ್ಲಿ ಮತ್ತೆ ಸಿದ್ದಪ್ಪ ಸಿಕ್ಕಿದರು.

"ಏನ್ ಇವತ್ತೇ ಹೊರಟುಬಿಟ್ರಾ ?" ಕೇಳಿದೆ.

"ಮತ್ತೇನು, ಮನೇಲಿ ಈಗಾಗಲೆ ಗಾಬರಿಯಾಗಿರ್ತಾರೆ."

"ಸ್ವಾಮಿಗಳು ಅಪ್ಪಣೆ ಕೊಡಿಸಿದ್ರಾ ?"

"ಆಯ್ತು ಅದೇ ಕೃಷ್ಣಮೂರ್ತಿಪುರಂನಲ್ಲಿರುವ ಯಶಸ್ವಿ ಬ್ಯಾಂಕಿನ ಮ್ಯಾನೇಜರ್ ರಾಘವೇಂದ್ರರಾಯರ ಹತ್ತಿರ ಹೋಗಿ. ಅವರು ಒಳ್ಳೆ ಸಲಹೆ ಕೊಡ್ತಾರೆ. ಅವರು ಹೇಳಿದ ಹಾಗೆ ಮಾಡಿ ಅಂತಾ ಹೇಳಿದ್ದಾರೆ . . ." ಎಂದಾಗ ನನ್ನ ಪ್ರಯತ್ನ ಸಫಲವಾಯಿತು ಎನಿಸಿತು. ಊರನ್ನು ತಲುಪುತ್ತಿದ್ದಂತೆ ಒಂದೇ ಆಟೋದಲ್ಲಿ ಮನೆ ಕಡೆ ಹೊರಟೆವು. ಆಟೋದಿಂದ ಸಿದ್ದಪ್ಪನವರು ಇಳಿಯುತ್ತಿದ್ದಂತೆ, "ನಾಳೆ ಕೃಷ್ಣಮೂರ್ತಿಪುರಂಗೆ ಬರುತ್ತೀರಲ್ಲಾ ಭೇಟಿಯಾಗುವ" ಎಂದೆ. ಸಿದ್ದಪ್ಪನಿಗೆ ಅರ್ಥವಾಗಲಿಲ್ಲ !

---

## ಠೇವಣಿಗಳ ಪ್ರವೃತ್ತಿಗಳು

1981-82ರಲ್ಲಿ (ಜುಲೈ-ಜೂನ್) ವಾಣಿಜ್ಯ ಬ್ಯಾಂಕುಗಳ ಠೇವಣಿಗಳ ಬೆಳವಣಿಗೆಯ ವೇಗ ಗಮನಾರ್ಹವಾಗಿ ಇಳಿಯಿತು. 1981-82ರಲ್ಲಿ ಅನುಸೂಚಿತ ವಾಣಿಜ್ಯ ಬ್ಯಾಂಕುಗಳ ಒಟ್ಟು ಠೇವಣಿಗಳು ಕೇವಲ ರೂ. 5,282 ಕೋಟಿಯಷ್ಟು, ಎಂದರೆ ಶೇಕಡ 13.0ರಷ್ಟು ಮಾತ್ರ, ಅಧಿಕವಾದುವು. ಇದಕ್ಕೆ ಪ್ರತಿಯಾಗಿ 1980–81ರಲ್ಲಿ ಇವು ಇನ್ನೂ ಹೆಚ್ಚಾಗಿ, ಎಂದರೆ ರೂ. 7,172 ಕೋಟಿಯಷ್ಟು (ಶೇ. 21.5) ಅಧಿಕವಾದುವು. ಶೇ. 13.0ರ ಬೆಳವಣಿಗೆ ದರ 1967–68ರಿಂದ ಈಚೆಗಿನ ಅವಧಿಯಲ್ಲಿ ಅತ್ಯಂತ ಕಡಿಮೆಯದು. ಬ್ಯಾಂಕ್ ರಾಷ್ಟ್ರೀಕರಣದ ಅನಂತರದ ಪ್ರಥಮ ವರ್ಷವಾದ 1969–70ರಲ್ಲಿ (ಜುಲೈ-ಜೂನ್) ಠೇವಣಿಗಳು ಶೇ. 13.5ರಷ್ಟು ಅಧಿಕವಾಗಿದ್ದುವು. ಅಲ್ಲಿಂದೀಚೆಗಿನ ಹನ್ನೊಂದು ವರ್ಷಗಳಲ್ಲಿ, ಎಂದರೆ 1970–71ರಿಂದ 1980–81ರ ವರೆಗೆ, ಠೇವಣಿಗಳ ಬೆಳವಣಿಗೆ ದರ ಏಳು ವರ್ಷಗಳಲ್ಲಿ ಶೇ. 20.4—ಶೇ. 24.5ರ ನಡುವೆಯೂ, ನಾಲ್ಕು ವರ್ಷಗಳಲ್ಲಿ ಶೇ. 16.4ರ—ಶೇ. 17.8ರ ನಡುವೆಯೂ ವ್ಯತ್ಯಾಸವಾಗುತ್ತಿತ್ತು.*

* ಭಾರತದಲ್ಲಿ ಬ್ಯಾಂಕಿಂಗ್ ಪ್ರವೃತ್ತಿ ಮತ್ತು ಪ್ರಗತಿ ಕುರಿತ ರಿಸರ್ವ್ ಬ್ಯಾಂಕ್ ವರದಿ, 1981–82

# ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು

ಎಚ್. ಗೋವಿಂದರಾಜ ರಾವ್

ಇಪ್ಪತ್ತು ಅಂಶಗಳ ಆರ್ಥಿಕ ಕಾರ್ಯಕ್ರಮದಲ್ಲಿ ಘೋಷಿಸಿದಂತೆ, ಗ್ರಾಮೀಣ ಋಣಿತ್ವವನ್ನು ಸೀಮಿತಗೊಳಿಸಿದ್ದರ ಪರಿಣಾಮವಾಗಿ ಗ್ರಾಮೀಣ ಲೇವಾದೇವಿಗಾರರ ನಿರ್ಗಮನದಿಂದುಂಟಾದ ಕೊರತೆಯನ್ನು ಭರ್ತಿಮಾಡಲು ಒಂದು ಪರ್ಯಾಯ ಸಂಸ್ಥೆಯ ಆವಶ್ಯಕತೆ ಉಂಟಾಯಿತು. ಮುಖ್ಯವಾಗಿ ಸಣ್ಣ ಹಾಗೂ ಅತಿ ಸಣ್ಣ ರೈತರುಗಳ, ಕೃಷಿ ಕಾರ್ಮಿಕರ, ಗ್ರಾಮೀಣ ಕುಶಲಕರ್ಮಿಗಳ ಮತ್ತು ದುರ್ಬಲ ವರ್ಗದವರ ಆವಶ್ಯಕತೆಗಳನ್ನು ಪೂರೈಸುವುದಕ್ಕಾಗಿ ಹೊಸ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂದು ಯೋಜಿಸಲಾಯಿತು. ಆ ಸಂಸ್ಥೆಗಳೇ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು. ಪ್ರಥಮ ಗ್ರಾಮೀಣ ಬ್ಯಾಂಕು 1976ರಲ್ಲಿ ಆರಂಭವಾಯಿತು.

ಗ್ರಾಮೀಣ ಬ್ಯಾಂಕು ಕೇಂದ್ರ ಸರಕಾರ, ರಾಜ್ಯ ಸರಕಾರ ಮತ್ತು ಆಶ್ರಯದಾತ ಬ್ಯಾಂಕಿನಿಂದ ಪಡೆದ ಬಂಡವಾಳವನ್ನೂ, ಸಾರ್ವಜನಿಕರಿಂದ ಶೇಖರಿಸಿದ ಠೇವಣಿಯನ್ನೂ, ಭಾರತೀಯ ರಿಸರ್ವ್ ಬ್ಯಾಂಕ್ ಪುನರ್ಧನ ಸಹಾಯವನ್ನೂ ತನ್ನ ಮೂಲಧನವನ್ನಾಗಿ ಹೊಂದಿರುತ್ತದೆ.

ಸಣ್ಣ ಹಾಗೂ ಅತಿ ಸಣ್ಣ ರೈತರು, ಕೃಷಿ ಕಾರ್ಮಿಕರು, ಸಹಕಾರಿ ಸಂಸ್ಥೆಗಳು, ಕುಶಲಕರ್ಮಿಗಳು, ಸಣ್ಣ ವ್ಯಾಪಾರಿಗಳು ಮತ್ತು ವ್ಯಾಪಾರ ವಾಣಿಜ್ಯ ಕೈಗಾರಿಕೆ ಅಥವಾ ಇತರ ಉತ್ಪಾದನ ಕಾರ್ಯಗಳಲ್ಲಿ ನಿರತರಾದ ಕಡಿಮೆ ಆದಾಯದ ಜನರಿಗೆ ಸಾಲವನ್ನು ಒದಗಿಸುವುದು ಗ್ರಾಮೀಣ ಬ್ಯಾಂಕಿನ ಮುಖ್ಯ ಉದ್ದೇಶ.

ಗ್ರಾಮೀಣ ಜನತೆಗಾಗಿಯೇ ರೂಪುಗೊಂಡ ಗ್ರಾಮೀಣ ಬ್ಯಾಂಕು ಜನತೆಯ ಆವಶ್ಯಕತೆಗಳನ್ನು ಪೂರೈಸುವುದರಲ್ಲಿ ಸಹಕಾರಿಯಾಗುತ್ತದೆ. ತನ್ನ ಸಿಬ್ಬಂದಿ ವರ್ಗಕ್ಕೆ ಸ್ಥಳೀಯ ಜನರನ್ನೇ ಭರ್ತಿ ಮಾಡಿಕೊಳ್ಳುತ್ತದೆ. ಬ್ಯಾಂಕಿನ ಕಾರ್ಯವಿಧಾನ ಸರಳ ಮತ್ತು ಸುಲಭ. ಅದರ ಪುಸ್ತಕಗಳೂ ಅರ್ಜಿ ನಮೂನೆಗಳೂ ಸ್ಥಳೀಯ ಭಾಷೆಯಲ್ಲಿಯೇ ಇರುತ್ತವೆ. ಗ್ರಾಮೀಣ ಬ್ಯಾಂಕು ಸಾಲದ ಮೇಲೆ ವಿಧಿಸುವ ಬಡ್ಡಿದರ, ಸಹಕಾರಿ ಸಂಸ್ಥೆಗಳು ವಿಧಿಸುವ ಬಡ್ಡಿದರಕ್ಕಿಂತ ಹೆಚ್ಚಿಗೆ ಇರುವುದಿಲ್ಲ. ಮೂರು ವರ್ಷಗಳಿಗೂ ಕಡಿಮೆ ಅವಧಿಗೆ ಇಟ್ಟಿರುವ ಸಾವಧಿ ಠೇವಣಿಗೆ ವಾಣಿಜ್ಯ ಬ್ಯಾಂಕುಗಳು ಕೊಡುವ ಬಡ್ಡಿಗಿಂತ ಸೇಕಡ ½ದಷ್ಟು ಹೆಚ್ಚಿಗೆ ಬಡ್ಡಿಯನ್ನು ನೀಡಬಹುದು.

ಜೂನ್ 1982ರ ಅಂತ್ಯದಲ್ಲಿ ಇಂಥ 121 ಬ್ಯಾಂಕುಗಳು 207 ಜಿಲ್ಲೆಗಳಲ್ಲಿ ಕಾರ್ಯನಿರತವಾಗಿದ್ದುವು. ದೇಶಾದ್ಯಂತ ಹಬ್ಬಿರುವ 5,393 ಶಾಖೆಗಳ ಮೂಲಕ 38,223.48 ಲಕ್ಷ ರೂಪಾಯಿಗಳ ಠೇವಣಿಗಳನ್ನು ಪಡೆದುಕೊಂಡು, 46,258.88 ಲಕ್ಷ ರೂಪಾಯಿಗಳಷ್ಟು ಸಾಲ ನೀಡಿದ್ದುವು.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ತಮ್ಮ ಮಿತವ್ಯಯದ ಧೋರಣೆ, ಸ್ಥಳೀಯ ಸಿಬ್ಬಂದಿಗಳ ನೇಮಕ, ಮುಂಗಡ ನೀಡುವಲ್ಲಿ ಸರಳ ವಿಧಾನ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಕೃಷಿ ಹಾಗೂ ಕೃಷಿ ಸಂಬಂಧಿ ಉದ್ದೇಶಗಳಿಗಾಗಿ ಮತ್ತು ಕೃಷೀತರ ಉದ್ದೇಶಗಳಿಗಾಗಿ ಸಮಾಜದ ದುರ್ಬಲ ವರ್ಗದವರಿಗೆ ಸಾಲದ ಸೌಲಭ್ಯ ನೀಡುವುದರ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕು ಸೌಲಭ್ಯವನ್ನು ಇತರ ವಾಣಿಜ್ಯ ಬ್ಯಾಂಕುಗಳಿಗಿಂತ ಹೆಚ್ಚು ಯಶಸ್ವಿಯಾಗಿ ಜನರಿಗೆ ಒದಗಿಸುವಲ್ಲಿ ಮೇಲುಗೈ ಸಾಧಿಸಿವೆ.

ಗ್ರಾಮೀಣ ಬ್ಯಾಂಕಿನ ಯಶಸ್ಸು ಸರ್ಕಾರದ ಮತ್ತು ಸಾರ್ವಜನಿಕರ ಪ್ರೋತ್ಸಾಹವನ್ನು ಅವಲಂಬಿಸಿದೆ.

# ಮುಂಗಟ್ಟೆಯಾಚೆಗಿನ ಚೆಕ್ಕಿನ ಹಣೆಬರಹ*

## ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲಿ ಬೆಂಗಳೂರಿನಲ್ಲಿ ನಡೆದ ಬ್ಯಾಂಕಿಂಗ್ ಕನ್ನಡ ಶಿಬಿರದಲ್ಲಿ ಅನುವಾದಿಸಲಾದ ಲೇಖನ

**ಅನುವಾದ**

ಎಚ್. ಗೋವಿಂದರಾಜರಾವ್, ಬಿ. ಎನ್. ಸುಧೀಂದ್ರ, ಬಿ. ಕೆ. ಗುರುರಾಜ್, ಕೆ. ಆರ್. ಸುಧೀಂದ್ರ,
ಸಿ. ಎಂ. ವಿಶಾಚಯ್ಯ, ಪಿ. ಎಸ್. ರಾಜಗೋಪಾಲ್, ಎನ್. ನಾರಾಯಣ್, ಸಾ. ಅ. ಮಂಜುನಾಥ.
ಬಿ. ಎಸ್. ಚಂದ್ರಶೇಖರ, ಪಾ. ರಾಜಗೋಪಾಲ, ಹ. ಶಿ. ಪ್ರದ್ಯುಮ್ನ

ಹಾವರ್‌ಗೇಟಿನ ಶ್ರೀ ಫ್ರಾಂಕ್ ಪಿಕ್‌ಲ್‌ಟನ್‌ರವರು ತಮ್ಮ ಮಗಳು ಕುದುರೆಸವಾರಿಯಲ್ಲಿ ಸಾಕಷ್ಟು ಭರವಸೆ ಮೂಡಿಸುತ್ತಿದ್ದುದರಿಂದ ಆಕೆ ಅದುವರೆಗೆ ಸವಾರಿ ಮಾಡುತ್ತಿದ್ದ ಕುಳ್ಳ ಕುದುರೆಯ ಬದಲು ಉತ್ತಮವಾದ ದೊಡ್ಡ ಕುದುರೆಯನ್ನು ಆಕೆಗೆ ತೆಗೆದುಕೊಡುವುದು ಯುಕ್ತವೆಂದು ಅಕ್ಟೋಬರ್ 1977ರಲ್ಲಿ ನಿರ್ಧರಿಸಿದರು. ಹಾಗೇ ಮಾಡಿದರು. ಅನಂತರ ಕುಳ್ಳಕುದುರೆಯನ್ನು ಮಾರಲು ನಿರ್ಧರಿಸಿದರು.ಅಂತೆಯೇ ನೆರೆಪಟ್ಟಣವಾದ ರೈಟನ್ನಿನ ಶ್ರೀ ಥಿಯೋಫಿಲಸ್ ಜೋನಾ ಎಂಬವರೊಡನೆ ಸಂಪರ್ಕ ಉಂಟಾಯಿತು. ಸ್ವಲ್ಪ ಚೌಕಾಸಿಯ ಅನಂತರ ಅವರು ಶ್ರೀ ಜೋನರು ಸೂಚಿಸಿದ 100 ಪೌಂಡು ಬೆಲೆಗೆ ಒಪ್ಪಿಕೊಂಡರು. ಈ ಮೊಬಲಗಿಗೆ ಶ್ರೀ ಜೋನರು ಅವರಿಗೆ ಯುನೈಟೆಡ್ ಪ್ರಾಪ್‌ಷೈರ್ ಬ್ಯಾಂಕಿನ ರೈಟನ್ ಶಾಖೆಯ ಮೇಲೆ ಲಿಖಿತವಾದ ರೇಖಿತ ಚೆಕ್ಕೊಂದನ್ನು ಕೊಟ್ಟರು. ಶ್ರೀ ಜೋನರ ಸ್ಥಾನಮಾನದ ಬಗ್ಗೆ ಏನೂ ತಿಳಿವಳಿಕೆಯಿಲ್ಲದ ಶ್ರೀ ಪಿಕ್‌ಲ್‌ಟನ್ ಅದನ್ನು ಕೂಡಲೇ ತೆಗೆದುಕೊಂಡು ಬ್ಯಾಂಕಿನ ರೈಟನ್ ಶಾಖೆಗೆ ಹೋದರು. ಸೌತ್‌ಲೆಂಡ್ ಬ್ಯಾಂಕಿನ ಹಾವರ್‌ಗೇಟ್ ಶಾಖೆಯಲ್ಲಿನ ತಮ್ಮ ಸ್ವಂತ ಖಾತೆಗೆ ಧನಿಸಲು ಆ ಚೆಕ್ಕನ್ನು ಜಮಾ ಮಾಡಿದರು. ಆ ಚೆಕ್ ಪಾವತಿಯಾಗಿದೆಯೇ ಎಂದು ಅನಂತರ ಕೇಳಿದರು. ಆ ದಿನದ ವ್ಯವಹಾರ ಮುಕ್ತಾಯದವರೆಗೆ ಅವರಿಗೆ ಆ ಬಗ್ಗೆ ಭರವಸೆಯನ್ನೇನೂ ಕೊಡುವುದು ಸಾಧ್ಯವಿಲ್ಲ ಎಂಬುದಾಗಿ ಅವರಿಗೆ ಹೇಳಲಾಯಿತು. ಇದಾದ್ದು ಬೆಳಗ್ಗೆ 11–30ರ ಸುಮಾರಿಗೆ. ಶ್ರೀ ಪಿಕಲ್‌ಟನ್ ಸ್ವತಃ ಮಿಡ್‌ಲೆಂಡ್ ವಿಶ್ವವಿದ್ಯಾನಿಲಯದಲ್ಲಿ ಬ್ಯಾಂಕಿಂಗ್ ಮತ್ತು ಅರ್ಥಶಾಸ್ತ್ರ ಅಧ್ಯಾಪಕರಾಗಿದ್ದುದರಿಂದ ಬಹುತೇಕ ಗ್ರಾಹಕರಿಗಿಂತ ಅಧಿಕವಾಗಿ ಬ್ಯಾಂಕಿಂಗಿನ ಒಳದಾರಿಯ ಪರಿಚಯ ಹೊಂದಿದ್ದರು. ಚೆಕ್ಕಿನ ಗತಿ ಏನು ಎಂಬುದನ್ನು ಹೇಳಲು ಬ್ಯಾಂಕು ನಿರಾಕರಿಸಿದ್ದನ್ನು ಅವರು ಪ್ರತಿಭಟಿಸಿದರು. ಬೇರೊಂದು ಬ್ಯಾಂಕ್ ಏನಾದರೂ ಚೆಕ್ಕನ್ನು ಹಾಜರುಪಡಿಸಿದ್ದ ಪಕ್ಷದಲ್ಲಿ ಕೂಡಲೇ ಪಾವತಿ ಮಾಡಲಾಗುತ್ತಿತ್ತು. ಅಥವಾ ಅದನ್ನು ಅನಾದರಿಸಲಾಗುತ್ತಿತ್ತು—ಎಂಬ ಅಂಶವನ್ನು ಅವರು ಎತ್ತಿ ತೋರಿಸಿದರು. ಆದರೆ ಅವರ ಕೋರಿಕೆಯನ್ನು ವ್ಯವಸ್ಥಾಪಕರಿಗೆ ತಿಳಿಸಿದ್ದ ನಗದಿಗಾರನದು ಒಂದೇ ಹಠ—'ವ್ಯವಹಾರದ ವೇಳೆ ಮುಗಿಯುವವರೆಗೂ ಯಾವ ಉತ್ತರವನ್ನೂ ಕೊಡಲಾಗದು' ಎಂದು.

ಅನಂತರ ಶ್ರೀ ಪಿಕ್‌ಲ್‌ಟನ್ ಚೆಕ್ಕನ್ನು ಹಿಂದಿರುಗಿಸಬೇಕೆಂದು ಆಗ್ರಹಪಡಿಸಿದರು. ಈ ರೀತಿ ಚೆಕ್ಕನ್ನು ಬಿಡುಗಡೆ ಮಾಡುವುದರಿಂದ ಮತ್ತೊಂದು ನಿಯಮವನ್ನು ಮುರಿಯುವಂತಾಗುವುದೆಂದು ನಗದಿಗಾರ ಹೆದರಿದನೆಂಬುದು ನಿಸ್ಸಂದೇಹ. ಅಂತೂ ಮನಸ್ಸಿಲ್ಲದ ಮನಸ್ಸಿನಿಂದ ನಗದಿಗಾರ ಕೊನೆಗೂ ಕೊಟ್ಟ ಚೆಕ್ಕನ್ನು ಶ್ರೀ ಪಿಕ್‌ಲ್‌ಟನ್ ಪಡೆದುಕೊಂಡರು. ಅವರು ಅನಂತರ 2 ಮೈಲು ದೂರದಲ್ಲಿದ್ದ ತಮ್ಮದೇ ಬ್ಯಾಂಕಿಗೆ ಕಾರಿನಲ್ಲಿ ತೆರಳಿ ಚೆಕ್ಕನ್ನು

---

* Eynoe Smart I A B: Fate Across the Counter (Misleading Cases in Banking), *Journal of the Institute of Bankers*, February 1981.

ಜಮಾ ಮಾಡಿದರು. ರೈಟನ್ನಿಗೆ ಒಬ್ಬ ಸಂದೇಶವಾಹಕನನ್ನು ವಿಶೇಷವಾಗಿ ಕಳುಹಿಸಿ ತೀರುವೆಯನ್ನು ಪಡೆಯಬೇಕೆಂದು ಪ್ರಾರ್ಥಿಸಿದರು. ಚೆಕ್ ಪಾವತಿಯಾದರೆ ಸಂದೇಶವಾಹಕನಿಗೆ ಬ್ಯಾಂಕರನ ಪಾವತಿಯ ನಮೂನೆಯೊಂದನ್ನು ಕೊಡಲಾಗುತ್ತಿತ್ತು. ಸೌತ್‌ಲೆಂಡ್ ಬ್ಯಾಂಕ್ ತೆಗೆದುಕೊಂಡ ಶ್ರಮಕ್ಕಾಗಿ ತಗಲಿದ ವೆಚ್ಚವನ್ನು ಶ್ರೀ ಪಿಕ್‌ಲ್‌ಟನ್ ತುಂಬಿಕೊಡಬೇಕಾಗುತ್ತಿತ್ತು ಎಂಬುದು ಸರಿಯೇ.

ಅದು ಹಾಗಾಗಿದ್ದರೆ ಈ ದಿನ ನಮ್ಮ ಮುಂದೆ ಯಾವ ಸಮಸ್ಯೆಯೂ ಇರುತ್ತಿರಲಿಲ್ಲ. ಆದರೆ ಈ ಪ್ರಸಂಗದಲ್ಲಿ ಹಣ ಪಾವತಿ ಮಾಡಬಾರದೆಂದು ಆದೇಶವಿದೆ ಎಂಬ ಲಿಖಿತದೊಂದಿಗೆ ಚೆಕ್ಕು ವಾಪಸ್ ಮಾಡಲ್ಪಟ್ಟಿತ್ತು. ಬೆಳಗ್ಗೆ 11-30ರಿಂದ ಮಧ್ಯಾನ್ನ 1-30ರ ನಡುವೆ, ರೈಟನ್ನಿಗೆ ಸಂದೇಶವಾಹಕ ಬಂದಾಗ, ಶ್ರೀ ಜೋನಾರು ಚೆಕ್ಕಿನ ಪಾವತಿಯನ್ನು ತಡೆದಿದ್ದರು. ಹಾಗೆ ಮಾಡಲು ಅದರ ಕಾರಣಗಳೇನೆಂಬುದಕ್ಕೆ ಯಾವ ಪುರಾವೆಯನ್ನೂ ಮುಂದಿಟ್ಟಿಲ್ಲ. ನನ್ನ ಮುಂದೆ ಇರುವುದೆಂದರೆ ಚೆಕ್ಕನ್ನು ತಡೆಯಲಾಗಿದೆ ಎಂಬ ಸಂಗತಿಯೊಂದೇ.

ಶ್ರೀ ಪಿಕ್‌ಲ್‌ಟನ್ನರು ಶ್ರೀ ಜೋನಾರನ್ನು ದೂರವಾಣಿಯ ಮೂಲಕ ಸಂಪರ್ಕಿಸಲು ಪ್ರಯತ್ನಿಸಿ ವಿಫಲಗೊಂಡಮೇಲೆ ತಮ್ಮ ಸಲಹಾ ವಕೀಲರನ್ನು ದೂರವಾಣಿಯ ಮೂಲಕ ಸಂಪರ್ಕಿಸಿದರು. ಅವರು ಶ್ರೀ ಜೋನಾರಿಗೆ ಯುಕ್ತವಾದೊಂದು ಪತ್ರ ಬರೆದರು. ಆದರೆ, ಮೂರು ದಿನದ ಅನಂತರ ಶ್ರೀ ಜೋನಾರನ್ನು ಅವರ ಕುದುರೆಗಳಲ್ಲೊಂದು ಒದೆಯಿತು (ಆದರೆ ಅವರನ್ನು ಒದ್ದುದು ಈ ಘಟನೆಗೆ ಮೂಲಕಾರಣವಾದ ಕುದುರೆಯಲ್ಲ. ವಿಧಿಯ ಆಣಕ ಅಷ್ಟು ದೂರ ಹೋಗಲಿಲ್ಲ). ಸ್ವಲ್ಪ ಕಾಲದಲ್ಲೇ ಜೋನಾ ತೀರಿಕೊಂಡರು. ಅನೇಕ ಸಾಲಿಗರು ಸಾಲದ ಪಾವತಿಗಾಗಿ ಸಾಲಾಗಿ ನಿಂತಾಗ ಅವರ ಆಸ್ತಿ ಸಾಲದೆ ಬಂದ ಪರಿಣಾಮವಾಗಿ ಅವರ ಸ್ವತ್ತು ದಿವಾಳಿಯಾದದ್ದು ಕಂಡುಬಂತು.

ಶ್ರೀ ಪಿಕ್‌ಲ್‌ಟನ್ ಆ ಸಾಲಿಗರ ಗುಂಪಿಗೆ ಸೇರಿಕೊಳ್ಳುವುದಷ್ಟಕ್ಕೇ ತೃಪ್ತರಾಗಲಿಲ್ಲ. ಅವರ ನಷ್ಟದ ಪರಿಮಾಣ ಎಷ್ಟೆಂಬುದನ್ನು ಇದುವರೆಗೂ ಅಳತೆ ಮಾಡಿಲ್ಲ. ಆದರೆ ಪ್ರಾಯಶಃ ಚೆಕ್ಕಿನ ಮೊಬಲಗಿನ ಅರ್ಧದಷ್ಟಾದರೂ ಇದ್ದಿರಬೇಕು. ಈ ನಷ್ಟ ಪ್ರತಿವಾದಿಗಳ ತಪ್ಪಿನಿಂದಾದುದು ಎಂದು ಅವರು ಹೇಳುತ್ತಾರೆ. ಶ್ರೀ ಪಿಕ್‌ಲ್‌ಟನ್ ಚೆಕ್ಕನ್ನು ರೈಟನ್ನಿನಲ್ಲಿ ಜಮಾ ಮಾಡಿದಾಗ ಶ್ರೀ ಜೋನಾರ ಖಾತೆಯಲ್ಲಿ ಚೆಕ್ಕನ್ನು ಪಾವತಿಮಾಡಲು ಸಾಕಷ್ಟು ಸಿಲ್ಕು ಇತ್ತು; ಆ ದಿನ ಶ್ರೀ ಜೋನಾ ಅವರು ಚೆಕ್ಕಿನ ಪಾವತಿಯನ್ನು ತಡೆದ ಮೇಲೆಯೂ ಇತ್ತು. ಇದು ಸಾಬೀತಾಗಿದೆ. ಆದ್ದರಿಂದ ಬ್ಯಾಂಕು ಮೊದಲನೆಯ ಹಾಜರಾತಿಗೇ ಒಂದು ಪಕ್ಷ ಚೆಕ್ಕನ್ನು ಪಾವತಿ ಮಾಡಿದ್ದಿದ್ದರೆ (ಸೌತ್‌ಲೆಂಡ್ ಬ್ಯಾಂಕಿನ ಸಂದೇಶವಾಹಕ ಹಾಜರು ಪಡಿಸಿದ್ದರೆ ಅವರು ಹಾಗೆಯೇ ಮಾಡುತ್ತಿದ್ದರು) ಶ್ರೀ ಜೋನಾರ ಪಾವತಿ ತಡೆಯ ಆದೇಶ ತಡವೆನಿಸುತ್ತಿತ್ತು, ಹಾಗೂ ಶ್ರೀ ಪಿಕ್‌ಲ್‌ಟನ್‌ಗೆ ಅವರ ಹಣ ದೊರಕುತ್ತಿತ್ತು.

ಇದಕ್ಕೆ ಉತ್ತರವಾಗಿ ಬ್ಯಾಂಕು ಹೇಳುವುದೇನಿದೆ? ನನಗೆ ತೋರುವಂತೆ, ಬಹಳ ಕಡಿಮೆ. ಅವರು ಬ್ಯಾಂಕಿಂಗ್ ಕುರಿತ ಸ್ಥಾಪಿತ ನಿಯಮವೊಂದನ್ನು ಅನುಸರಿಸಿದ್ದರೆಂಬುದು ಸ್ಪಷ್ಟ. ವಕೀಲರು 'ಬ್ಯಾಂಕಿಂಗ್ ಪದ್ಧತಿ ಕುರಿತ ಪ್ರಶ್ನೆಗಳು' ಎಂಬ ಕೃತಿಯ ಹನ್ನೊಂದನೆಯ ಆವೃತ್ತಿಗೆ ನನ್ನ ಗಮನ ಸೆಳೆದಿದ್ದಾರೆ. ಬ್ಯಾಂಕರುಗಳ ಸಂಸ್ಥೆ ಪ್ರಕಟಿಸಿರುವ ಈ ಗ್ರಂಥದ 391(2)ನೆಯ ಪ್ರಶ್ನೆಗೆ ಉತ್ತರ ಸ್ಪಷ್ಟವಾಗಿ ಈ ಅಂಶವನ್ನೊಳಗೊಂಡಿದೆ: ನಮ್ಮ ಮುಂದಿರುವ ಈ ಪ್ರಕರಣಕ್ಕೆ ಸಂಪೂರ್ಣವಾಗಿ ಅನುರೂಪವಾಗಿರುವ ಸಂದರ್ಭದಲ್ಲಿ, 'ವ್ಯವಹಾರದ ಅಂತ್ಯವಾಗುವವರೆಗೂ ಯಾವುದೇ ಉತ್ತರ ನೀಡಲು ಶಕ್ಯವಿಲ್ಲ' ಎಂಬುದಾಗಿ ಚೆಕ್ಕಿನ ಹಾಜರಿದಾರನಿಗೆ ತಿಳಿಸಬೇಕು. ಈ ನಿರ್ಣಯಕ್ಕೆ ಯಾವ ಕಾರಣವನ್ನೂ ಕೊಟ್ಟಿಲ್ಲ. ಆದರೆ ಈ ಪದ್ಧತಿ ಏಕರೀತಿಯಾಗಿಲ್ಲವೆಂಬುದನ್ನು ತೋರಿಸಲು ಪುರಾವೆಯನ್ನು ಕರೆಯಲಾಗಿದೆ. ಕೆಲವು ಬ್ಯಾಂಕುಗಳ ಕೆಲವು ಶಾಖೆಗಳು—ಬಹುಶಃ ಎಲ್ಲ ಬ್ಯಾಂಕುಗಳ ಕೆಲವು ಶಾಖೆಗಳು—ಕ್ರಮವಾಗಿ ಇದನ್ನು ಕಡೆಗಣಿಸಿ ಹಾಜರಿದಾರನಿಗೆ ಚೆಕ್ಕಿನ ಮೇಲೆ 'ಉತ್ತರ'ವನ್ನು ನೀಡುತ್ತವೆ.

ಈ ನಿಯಮಕ್ಕೆ ಏನು ಕಾರಣ ಎಂಬ ಸ್ಪಷ್ಟ ಪ್ರಶ್ನೆಗೆ ಖಚಿತವಾದ ಉತ್ತರವಿರುವಂತೆ ಕಾಣಿಸದು. ಸಾಮಾನ್ಯ ರೇಖಿತ ಚೆಕ್ಕಿನ ಮೊಬಲಗನ್ನು ಬ್ಯಾಂಕರನೊಬ್ಬನಿಗೆ ಪಾವತಿ ಮಾಡುವ ಬ್ಯಾಂಕರನಿಗೆ ಸಂರಕ್ಷಣೆ ನೀಡುವ 1882ರ ಹುಂಡಿ ಅಧಿನಿಯಮದ 80ನೆಯ ಪ್ರಕರಣದಲ್ಲಿ ಇದನ್ನು ಕಾಣಬಹುದು ಎಂಬುದಾಗಿ ವಾದದಲ್ಲಿ ಸೂಚಿಸಲಾಗಿದೆ. ಆದ್ದರಿಂದ ಬ್ಯಾಂಕರಿಗಲ್ಲದೆ ಬೇರೆ ರೀತಿಯಾಗಿ ಅವನು ಪಾವತಿ ಮಾಡಿದರೆ ಅವನು ಸಂರಕ್ಷಣೆಯನ್ನು ಕಳೆದುಕೊಳ್ಳುತ್ತಾನೆ ಎಂದು ಹೇಳಲಾಗಿದೆ. ಆದ್ದರಿಂದಲೇ ವಿಶೇಷ ಹಾಜರಾತಿಗೂ, ಮುಂಗಟ್ಟೆಯ (ಕೌಂಟರ್) ಮೇಲಿನ ಹಾಜರಾತಿಗೂ ವ್ಯತ್ಯಾಸ ಇರತಕ್ಕದ್ದು.

ಆದರೆ ಚೆಕ್ಕನ್ನು ಇನ್ನೊಂದು ಶಾಖೆ ಅಥವಾ ಇನ್ನೊಂದು ಬ್ಯಾಂಕಿನಲ್ಲಿ ಖಾತೆಯೊಂದಕ್ಕೆ ಜಮೆ ಮಾಡುತ್ತಿದ್ದಲ್ಲಿ ಆಗ ಬ್ಯಾಂಕರೊಬ್ಬನಿಗೆ ಪಾವತಿ ಮಾಡಲಾಗುತ್ತಿದೆ, ಎಂದು ವಾದಿಗಳ ಪರವಾದ ವಕೀಲರು ವಾದಿಸಿದ್ದಾರೆ. ಈ ವಾದ ಯುಕ್ತಿಯುಕ್ತವಾಗಿದೆ ಎಂಬುದು ನನ್ನ ಅಭಿಪ್ರಾಯ. ಹಾಜರಾತಿಯ ಮಾಮೂಲಿನ ಪ್ರಕ್ರಿಯೆಯನ್ನು ಹ್ರಸ್ವಗೊಳಿಸಲಾಗಿದೆ, ಅಷ್ಟೆ. ರೇಖಣದ ಉಪಯುಕ್ತ ಪರಿಣಾಮವನ್ನು—ಎಂದರೆ ಅಪರಿಚಿತನೊಬ್ಬನಿಗೆ ಮುಂಗಟ್ಟೆಯ ಮೇಲಿಂದ ಪಾವತಿ ಆಗುವುದನ್ನು ತಡೆಯುವುದು—ವಿಫಲಗೊಳಿಸಿಲ್ಲ. ಅಪರಿಚಿತರಿಗೆ ಪಾವತಿ ಮಾಡಲಾಗುತ್ತಿಲ್ಲ. ಅವರ ಖಾತೆಗಾಗಿ ಬ್ಯಾಂಕೊಂದಕ್ಕೆ ಧನಿಸಲಾಗುತ್ತದೆ.

ವಾಸ್ತವವಾಗಿ ಈ ನಿಯಮಕ್ಕೆ ಪ್ರಕರಣ 80 ಆಧಾರವಾಗಿದ್ದಲ್ಲಿ, "ವ್ಯವಹಾರದ ಮುಕ್ತಾಯದವರೆಗೂ" ಎಂದಷ್ಟೇ ಈ ಉತ್ತರದ ನಿರಾಕರಣೆ ಏಕಾಗಿರಬೇಕು ? ಮತ್ತೊಂದು ಬ್ಯಾಂಕು ಚೆಕ್ಕನ್ನು ಹಾಜರುಪಡಿಸದಿದ್ದರೂ ಕೂಡ, ಮುಕ್ತಾಯದ ವೇಳೆಯವರೆಗೂ ಕಾಯುವ ಅಪರಿಚಿತನಿಗೆ ಬ್ಯಾಂಕು ಚೆಕ್ಕಿನ ಗತಿಯನ್ನು ತಿಳಿಸುತ್ತದೆಯೇ ? ಅಹುದಾದರೆ ಆಗ ಮೊದಲಿನ ನಿರಾಕರಣೆಗೆ ಪ್ರಕರಣ 80 ಕಾರಣವೇ ಅಲ್ಲ. ಅಹುದಲ್ಲವಾದರೆ ಆಗ ಬ್ಯಾಂಕಿನ ಪದ್ಧತಿಯ ಪ್ರಶ್ನೆ ಓದುಗನನ್ನು ತಪ್ಪು ಅಭಿಪ್ರಾಯಕ್ಕೆ ಒಳಪಡಿಸಿದೆ.

ರಚಕ (ಶ್ರೀ ಜೋನಾ) ಚೆಕ್ಕಿನ ಪಾವತಿಯನ್ನು ತಡೆಯಬೇಕೆಂದು ಬಯಸಿ (ಎಂದರೆ ಜೋನಾ ಮಾಡಿದಂತೆ) ಮತ್ತು ಬ್ಯಾಂಕು ಪಾವತಿ ಮಾಡಿದ್ದುದರಿಂದ ನಿಷ್ಫಲಗೊಂಡು, (ಜೋನಾರಿಗೆ ಆಗಬಹುದಾಗಿದ್ದಂತೆ) ಬ್ಯಾಂಕು ಮಾಮೂಲು ವ್ಯವಹಾರದ ಮಾರ್ಗದಿಂದ ಹೊರಗಡೆ ಕಾರ್ಯ ನಡೆಸಿದೆ ಎಂದು ಸವಾಲು ಹಾಕಬಹುದು ಎಂಬ ಹೆದರಿಕೆಯೇ ಕಾರಣವಾಗಿರಬಹುದೆಂಬುದನ್ನು ಈ 'ವ್ಯವಹಾರದ ಮುಕ್ತಾಯ' ಎಂಬ ವಿಚಾರ ಸೂಚಿಸುತ್ತದೆ. ಸಾಮಾನ್ಯ ವ್ಯವಹಾರ ಮಾರ್ಗಕ್ಕೆ ಈ ಸಂಬಂಧವಾಗಿ ಎರಡು ಮುಖಗಳಿವೆ ಎಂದು, ನಾನು ಆಗಲೇ ಕೇಳಿರುವಂಥ ಪುರಾವೆಯ ಮೂಲಕ ಆತನ ವಾದವನ್ನೆದುರಿಸಬಹುದು.

ಇದು ಹೇಗೇ ಇರಲಿ, ರಿಂಗ್‌ಹ್ಯಾಂ ಹ್ಯಾಕೆಟ್ (ದಿ ಟೈಮ್ಸ್, ಕಾನೂನು ವರದಿ, 9 ಫೆಬ್ರುವರಿ 1980) ಮೊಕದ್ದಮೆಯಲ್ಲಿ ಮೇಲ್ಮನವಿ ನ್ಯಾಯಾಲಯದ ತೀರ್ಪಿನಿಂದ ಈ ಪರಿಸ್ಥಿತಿ ಬದಲಾಗಿದೆಯೆಂದು ಕೂಡ ವಾದಿಯ ಪರವಾದ ವಕೀಲರು ವಾದಿಸಿದ್ದಾರೆ. ಈ ವಾದಿಯ ಪರವಾಗಿ ಮಾಡಿದ ಯಾವುದೇ ಮನವಿಯನ್ನಾದರೂ ನಾನು ಒಪ್ಪಿಯೇನು. ಆದರೆ ಈ ಒಂದು ವಾದವನ್ನು ಮಾತ್ರ ಒಪ್ಪಲಾರೆ. 1882ರ ಅಧಿನಿಯಮದ 45ನೆಯ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ರೇಖಿತ ಚೆಕ್ಕೊಂದನ್ನು 'ಹಾಜರುಪಡಿಸಲಾಗಿತ್ತೆ ?' ಎಂಬ ಪ್ರಶ್ನೆ ಮೇಲ್ಮನವಿ ನ್ಯಾಯಾಲಯದ ಮುಂದಿತ್ತು. ಪ್ರಸಕ್ತ ಮೊಕದ್ದಮೆಯಲ್ಲಿ ಚೆಕ್ಕನ್ನು ಪ್ರಾರಂಭದಲ್ಲಿ ಒಯ್ದಿದ್ದಂತೆ ಈ ಪ್ರಶ್ನೆಗೆ ಒಳಪಟ್ಟ ಚೆಕ್ಕನ್ನು ರಚಕ ಅದನ್ನು ಯಾವ ಬ್ಯಾಂಕನ್ನು ಉದ್ದೇಶಿಸಿ ರಚಿಸಿದ್ದನೋ ಆ ಬ್ಯಾಂಕಿಗೆ ಒಯ್ಯಲಾಗಿತ್ತು. (ಚೆಕ್ಕಿನ ಪಾವತಿಯನ್ನು ತಡೆಹಿಡಿಯಲಾಗಿದೆಯೆಂದು ಸ್ಥಿರೀಕೃತವೆನ್ನಲಾದ ರೂಢಿಯೊಂದನ್ನು ಅನುಸರಿಸದ ಬಹುಶಃ ಬೇರೆಯೇ ಒಬ್ಬ ನಗದಿಗಾರ ಪ್ರಾಸಂಗಿಕವಾಗಿ, ಅವನಿಗೆ ತಿಳಿಸಿದ್ದಾನೆ ; ಆದರೆ ಆ ಮೊಕದ್ದಮೆಯಲ್ಲಿ ಆ ಕ್ರಮವನ್ನು ಪ್ರಶ್ನಿಸಲಿಲ್ಲ) ಚೆಕ್ಕನ್ನು 'ಹಾಜರುಪಡಿಸಲಾಗಿದೆ' ಎಂದು, ಅದನ್ನು ಒಂದು ಬ್ಯಾಂಕಾಗಲಿ ಅಥವಾ ಒಂದು ಬ್ಯಾಂಕಿನ ಮೂಲಕವಾಗಲಿ ಹಾಜರುಪಡಿಸದಿದ್ದರೂ ಸಹ, ಮೇಲ್ಮನವಿ ನ್ಯಾಯಾಲಯ ನಿರ್ಣಯಿಸಿತು. ಘನ ನ್ಯಾಯಾಧೀಶರಾದ ಲಾಟನ್ ಈ ಬಗ್ಗೆ ಹೀಗೆ ಹೇಳಿದ್ದಾರೆ :

"ಪ್ರಾಪ್ತಿಕರ್ತ ರೇಖಿತ ಚೆಕ್ಕನ್ನು ಬ್ಯಾಂಕೊಂದರ ಮೂಲಕ ಮಾತ್ರವೇ ಹಾಜರುಪಡಿಸಲು ಸಾಧ್ಯ ಎಂದು ಸಾಮಾನ್ಯವಾಗಿ ಭಾವಿಸಲಾಗುವುದೆಂದು ತೋರುತ್ತದೆ. ಅದೊಂದು ತಪ್ಪುಗ್ರಹಿಕೆ. 1882ರ ಅಧಿನಿಯಮದಲ್ಲಿ ರೇಖಿತ ಚೆಕ್ಕುಗಳಿಗೆ ಸಂಬಂಧಿಸಿದ ಉಪಬಂಧಗಳು (ಪ್ರಕರಣ 79 ಮತ್ತು 80) ಬ್ಯಾಂಕ್ ಮತ್ತು ಅದರ ಗ್ರಾಹಕನನ್ನು ಸಂರಕ್ಷಿಸುವ ಉದ್ದೇಶ ಹೊಂದಿವೆ. ಪ್ರಾಪ್ತಿಕರ್ತನ ಮೇಲೆ ಅವುಗಳ ಪ್ರಭಾವವಿಲ್ಲ. ಅವನು ಚೆಕ್ಕನ್ನು ಹಾಜರುಪಡಿಸಿದರೆ ಅವನಿಗೆ ತನ್ನ ಹಣ ದೊರೆಯದಿರಬಹುದು ; ಆದರೆ ಆ ಕಾರಣಕ್ಕಾಗಿ ಅದು ಹಾಜರುಪಡಿಸುವಿಕೆಯಲ್ಲ ಎನ್ನುವಂತಿಲ್ಲ."

ಅಧಿನಿಯಮದ ಉಪಬಂಧಗಳನ್ನು ಅಥವಾ ಅವುಗಳಿಗೆ ಸಂಬಂಧಿಸಿದಂತೆ ಬ್ಯಾಂಕುಗಳು ಮಾಡಿಕೊಳ್ಳಬಹುದಾದ ಯಾವುದೇ ನಿಯಮಗಳನ್ನು ಬಾಧಿಸುವಂಥ ಯಾವ ಅಂಶವೂ ಅಲ್ಲಿಲ್ಲ. ನ್ಯಾಯಮೂರ್ತಿಗಳು ಗಮನಿಸಿರುವಂತೆ, ಹಾಜರುಪಡಿಸಿದಾತ ತನ್ನ ಹಣವನ್ನು ಪಡೆಯಲಾರನೆಂಬುದು ಸ್ಪಷ್ಟ.

ಆದರೆ, ಇಲ್ಲಿ ನಿರ್ಣೀತ ಮೊಕದ್ದಮೆಗಳಿಂದ ವಾದಿಯ ಮೊಕದ್ದಮೆ ಬೆಂಬಲ ಪಡೆಯಬೇಕಾಗಿಲ್ಲ ಎಂದು ನನಗನಿಸುತ್ತದೆ. ಸ್ವಾರಸ್ಯದ ಸಂಗತಿ ಎಂದರೆ, ಇವುಗಳಲ್ಲಿ ಪ್ರಸಕ್ತವಾದವು ಯಾವುವೂ ಇಲ್ಲ. ನಿಯಮಪಾಲನೆಗಿಂತ ಅದರ ಉಲ್ಲಂಘನೆಗೆ ಹೆಚ್ಚಿನ ಮನ್ನಣೆ ಸಲ್ಲಬಾರದು ಎಂಬುದರ ಬಗ್ಗೆ ಸಾಕ್ಷ್ಯ ಸ್ಪಷ್ಟವಾಗಿದೆ. 'ಯಥಾನುಕ್ರಮ ವ್ಯವಹಾರ' ಎಂಬ ವಾದದ ಬಗ್ಗೆ ಸವಾಲು ಹಾಕುವುದು ಕಷ್ಟವಾಗುವಷ್ಟು ಮಟ್ಟಿಗೆ ಉಲ್ಲಂಘನೆಗಳು ಅಧಿಕ ಸಂಖ್ಯೆಯಲ್ಲಿವೆ ಮತ್ತು 80ನೆಯ ಪ್ರಕರಣ ಈ ಮೊಕದ್ದಮೆಗೆ ವಾಸ್ತವವಾಗಿ ಏನೂ ಸಂಬಂಧಿಸಿದ್ದಲ್ಲವೆಂದು ನಾನು ಹೇಳಿದ್ದೇನೆ.

ಈ ಎರಡೂ ವಾದಗಳಲ್ಲಿ ಯಾವುದರಲ್ಲಾಗಲಿ ಅಷ್ಟಿಷ್ಟು ಸತ್ವವಿದ್ದದ್ದೇ ಆದರೂ ಗ್ರಾಹಕರಿಗೆ ಅತೀವ ಕಿರಿಕಿರಿಯನ್ನು ಉಂಟುಮಾಡುವುದೆಂಬುದು ಸ್ಪಷ್ಟವಾಗಿರುವ, ಹಾಗೂ ಈ ಸಂದರ್ಭದಲ್ಲಾಗಿರುವಂತೆ ಅವರಿಗೆ ನಷ್ಟವನ್ನುಂಟುಮಾಡುವ ನಿಷಿದ್ಧ ಆಚರಣೆಗೂ ಸಮ್ಮತವಿಶೇಷ ಹಾಜರಾತಿಗೂ ನಡುವಣ ವ್ಯತ್ಯಾಸದಲ್ಲಿ ಯಾವುದೇ ತರ್ಕವನ್ನು ತಮ್ಮ ಗ್ರಾಹಕರಂತೆ ತಾವೂ ಕಾಣಲಾಗದ ಬ್ಯಾಂಕ್ ಅಧಿಕಾರಿಗಳಿಗೆ ಅಷ್ಟೇ ಸ್ಪಷ್ಟವಾಗಿ ಪೇಚನ್ನುಂಟುಮಾಡುವಂಥ ನಿಯಮವೊಂದನ್ನು ಎತ್ತಿಹಿಡಿಯಲು ನಾನು ಹಿಂದೆಗೆಯುತ್ತಿದ್ದೆ. ಆದ್ದರಿಂದ ಇದನ್ನು ನಾನು ಎತ್ತಿಹಿಡಿಯುವುದಿಲ್ಲ. ಪಿಕ್‌ಲ್‌ಟನ್ನರಿಗೆ ನಷ್ಟ ಪರಿಹಾರದ ಹಕ್ಕು ಇದೆ. ಒಪ್ಪೋಣ. ಅಸಮಂಜಸವೆಂದು ಸ್ಪಷ್ಟವಾಗಿರುವ ಈ ನಿಯಮದಿಂದ ಕೂಡಿದ ತಮ್ಮ ನಿಯಮಾವಳಿ ಪುಸ್ತಕಗಳನ್ನು ಬ್ಯಾಂಕುಗಳು ತಿದ್ದುಪಡಿ ಮಾಡಬೇಕೆಂದು ನಾನು ಒತ್ತಾಯಿಸುತ್ತೇನೆ.

# ವಿದೇಶಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ—ಇಟಲಿಯಲ್ಲಿ

**ಸಾ. ಅ. ಮಂಜುನಾಥ**

### ಹಿನ್ನೆಲೆ

ಅತ್ಯಂತ ಹಿಂದೆ ಇಟಲಿ ಇಡೀ ಯುರೋಪ್‌ಖಂಡದಲ್ಲಿಯೇ ಬ್ಯಾಂಕಿಂಗ್ ಮತ್ತು ಹಣಕಾಸು ವ್ಯವಸ್ಥೆಯಲ್ಲಿ ಅತ್ಯಂತ ಪ್ರಗತಿಪರವಾದ ರಾಷ್ಟ್ರವಾಗಿತ್ತು. ಆದರೆ 16ನೆಯ ಶತಮಾನದ ಅನಂತರ ರಾಜಕೀಯ ಏಕತೆಯು ನಷ್ಟದಿಂದಾಗಿ ಇಟಲಿ ಹಿಂದುಳಿಯತೊಡಗಿತು. 1861ರಲ್ಲಿ ಮತ್ತೆ ರಾಜಕೀಯ ಐಕ್ಯ ಸಾಧಿತವಾಗುವವರೆಗೆ ಇಟಲಿಯ ಆರ್ಥಿಕ ವ್ಯವಸ್ಥೆ ಅಸ್ತವ್ಯಸ್ತವಾಗಿಯೇ ಇತ್ತು. ಅನಂತರ ಆರ್ಥಿಕ ವ್ಯವಸ್ಥೆ ಉತ್ತಮಗೊಳ್ಳತೊಡಗಿತು. ಎರಡನೆಯ ಮಹಾಯುದ್ಧಾನಂತರದಲ್ಲಿ ಬ್ಯಾಂಕ್ ಠೇವಣಿ ವೇಗವಾಗಿ ಬೆಳೆಯುತ್ತ ಬಂದಿದೆ. ಈಗ ಇಟಲಿಯಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಸುವ್ಯವಸ್ಥಿತವಿದ್ದು, ಜನಗಳ ವಿಶ್ವಾಸವನ್ನುಗಳಿಸಿಕೊಂಡಿದೆ.

### ಸರ್ಕಾರ ಮತ್ತು ಆರ್ಥಿಕ ಚಟುವಟಿಕೆ

ಇಟಲಿಯ ಆರ್ಥಿಕ ಚಟುವಟಿಕೆಗಳಲ್ಲಿ ಸರಕಾರದ ಪ್ರವೇಶ ಬಹಳಮಟ್ಟಿಗೆ ಇದೆ. ದೇಶದ ಕೇಂದ್ರ ಬ್ಯಾಂಕು ಹಣಕಾಸು ಕ್ಷೇತ್ರದಲ್ಲಿ ದೇಶದ ನೀತಿಗಳನ್ನು ಜಾರಿಗೆ ತರುವ ಪ್ರಧಾನ ಆಡಳಿತಗಾರನಾಗಿದ್ದರೂ ಸಹ ದೇಶದ ಅರ್ಥಸಚಿವ ಖಾತೆಯ ಮೇಲ್ವಿಚಾರಣೆಗೆ ಒಳಪಟ್ಟು ಕೆಲಸ ಮಾಡಬೇಕಾಗುತ್ತದೆ. ದೇಶದ ಮಂತ್ರಿಮಂಡಲದಲ್ಲಿ 'ಉದರಿ ಮತ್ತು ಉಳಿತಾಯಕ್ಕಾಗಿ ಅಂತರ ಸಚಿವಾಲಯಗಳ ಸಮಿತಿ' ಎಂಬ ಸಮಿತಿ ಇದೆ. ದೇಶದ ಆರ್ಥಿಕ ನೀತಿ ನಿರ್ಧಾರಣೆಗಳು ಈ ಸಮಿತಿಯ ಒಪ್ಪಿಗೆಗೆ ಒಳಪಟ್ಟು ಆಗುತ್ತವೆ. ಈ ಸಮಿತಿಯ ಅಧೀನದಲ್ಲಿ ದೇಶದ ಕೇಂದ್ರ ಬ್ಯಾಂಕ್ ಕಾರ್ಯ ನಿರ್ವಹಿಸುತ್ತದೆ.

### ಕೇಂದ್ರ ಬ್ಯಾಂಕಿನ ರಚನಾಸ್ವರೂಪ

ಕೇಂದ್ರ ಬ್ಯಾಂಕಿನ ಷೇರುಗಳನ್ನು ಸಾಮಾಜಿಕ ಕಾನೂನಿನಡಿ ಸ್ಥಾಪಿತವಾದ ಬ್ಯಾಂಕುಗಳು, ರಾಷ್ಟ್ರೀಯ ಬಡ್ಡಿ ಬ್ಯಾಂಕುಗಳು, ಸಾಮಾಜಿಕ ಭದ್ರತಾ ಸಂಸ್ಥೆಗಳು, ಉಳಿತಾಯ ಬ್ಯಾಂಕುಗಳು ಮತ್ತು ವಿಮಾಸಂಸ್ಥೆಗಳು ಮಾತ್ರ ಹೊಂದಿರಬಹುದು. ಮೇಲ್ಕಂಡ ಸಂಸ್ಥೆಗಳಲ್ಲಿ ಕೆಲವು ಸಂಸ್ಥೆಗಳ ಷೇರು ಬಂಡವಾಳದ ಸಿಂಹಪಾಲನ್ನು ಸರಕಾರ ಹೊಂದಿರುತ್ತದೆ.

### ಕೇಂದ್ರ ಬ್ಯಾಂಕಿನ ಆಡಳಿತ

ಕೇಂದ್ರ ಬ್ಯಾಂಕಿನ ಆಡಳಿತವನ್ನು 13 ಜನ ನಿರ್ದೇಶಕರ ಮಂಡಳಿಯೊಂದು ನಡೆಸುತ್ತದೆ. ಕೇಂದ್ರ ಬ್ಯಾಂಕು ಹಾಗೂ ಸರಕಾರದ ನಡುವೆ ಸಿಬ್ಬಂದಿಯ ಕೊಳುಕೊಡುಗೆಗೆ ಅವಕಾಶವಿದೆ.

### ನಿರ್ದೇಶಕರ ಮಂಡಳಿ

ನಿರ್ದೇಶಕರ ಮಂಡಳಿಯ 13 ಜನ ಸದಸ್ಯರ ಆಯ್ಕೆ ಕೇಂದ್ರ ಬ್ಯಾಂಕಿನ 13 ಪ್ರಾದೇಶಿಕ ಕಛೇರಿಗಳಲ್ಲಿ ಷೇರುದಾರರ ಸರ್ವಸದಸ್ಯರ ಸಭೆಗಳಲ್ಲಿ ನಡೆಯುತ್ತದೆ. ಹೀಗೆ ಆಯ್ಕೆಯಾದ ನಿರ್ದೇಶಕರ ಅಧಿಕಾರಾವಧಿ ಮೂರು ವರ್ಷಗಳು. ಈ ಅವಧಿಯ ಅನಂತರ ಅವರು ಪುನರಾಯ್ಕೆಗೆ ಅರ್ಹರಾಗಿರುತ್ತಾರೆ.

ಬ್ಯಾಂಕಿನ ಸಾಮಾನ್ಯ ಆಡಳಿತವು ನಿರ್ದೇಶಕರ ಮಂಡಳಿಯ ಜವಾಬ್ದಾರಿಯಾಗಿರುತ್ತದೆ. ನಿರ್ದೇಶಕರ ಮಂಡಳಿಯ ಅಧ್ಯಕ್ಷ ಬ್ಯಾಂಕಿನ ಗವರ್ನರ್ ಆಗಿರುತ್ತಾನೆ ಮತ್ತು ಆತನಿಗೆ ತನ್ನ ಸ್ಥಾನಬಲದಿಂದಾಗಿ ನಿರ್ಣಾಯಕ ಮತವೊಂದನ್ನು ಚಲಾಯಿಸುವ ಅಧಿಕಾರವಿರುತ್ತದೆ. ಗವರ್ನರರ ನೇಮಕವನ್ನು ನಿರ್ದೇಶಕರ ಮಂಡಳಿಯೇ ಮಾಡುತ್ತದೆ. ಆದರೆ ಈ ನೇಮಕ ಇಟಲಿಯ ಗಣರಾಜ್ಯದ ಅಧ್ಯಕ್ಷ ಮತ್ತು ಮಂತ್ರಿಮಂಡಳದ ಸಮ್ಮತಿಗೆ ಒಳಪಟ್ಟು ಆಗಬೇಕಾಗುತ್ತದೆ. ಗವರ್ನರರ ಅಧಿಕಾರಾವಧಿ ಇಂತಿಷ್ಟೇ ಎಂಬ ನಿಗದಿ ಇಲ್ಲ.

ದೇಶದ ಅರ್ಥಸಚಿವರ ಪ್ರತಿನಿಧಿಯೊಬ್ಬ ಕೇಂದ್ರ ಬ್ಯಾಂಕಿನ ನಿರ್ದೇಶಕರ ಮಂಡಳಿಯ ಸಭೆಯಲ್ಲಿ ವೀಕ್ಷಕನಾಗಿ ಭಾಗವಹಿಸಬಹುದು. ಮಂಡಳಿಯ ಯಾವುದೇ ತೀರ್ಮಾನ ಬ್ಯಾಂಕಿನ ಕಾನೂನು, ನಿಯಮಾವಳಿ ಅಥವಾ ಅಧಿನಿಯಮಗಳಿಗೆ ವಿರುದ್ಧವಾಗಿದೆ ಎಂದು ಈ ವೀಕ್ಷಕನಿಗೆ ತೋರಿಬಂದರೆ ಅಂತಹ ತೀರ್ಮಾನದ ಜಾರಿಯನ್ನು 5 ದಿನಗಳ ಅವಧಿಯವರೆಗೆ ತಡೆಹಿಡಿಯುವ ಅಧಿಕಾರ ಈತನಿಗೆ ಇರುತ್ತದೆ.

# ಅರ್ಥವ್ಯವಸ್ಥೆಯಲ್ಲಿ ಷೇರು ಪೇಟೆಯ ಪಾತ್ರ

ಬಿ. ಎಸ್. ಚಂದ್ರಶೇಖರ

ಉತ್ಪಾದನೆಗೆ ಅಗತ್ಯವಾದ ಅಂಶಗಳಲ್ಲಿ ಬಂಡವಾಳವೂ ಒಂದು. ಆದ್ದರಿಂದ ಅಭಿವೃದ್ಧಿಯುಂಟಾಗಬೇಕಾದರೆ ಬಂಡವಾಳದ ನಿರ್ಮಾಣವಾಗಬೇಕು. ಬಂಡವಾಳದ ನಿರ್ಮಾಣಕ್ಕೆ ಉಳಿತಾಯವೇ ಮೂಲ. ಆದರೆ ಉಳಿತಾಯವಷ್ಟೇ ಸಾಲದು; ಅದರ ವಿನಿಯೋಜನೆಯಾಗಬೇಕು.

ಭಾರತದಲ್ಲಿ ಬಹುಮಂದಿ ಬಡತನದ ರೇಖೆಯ ಕೆಳಗೇ ಇರುವರಾದರೂ ಸ್ವಲ್ಪವಾದರೂ ಉಳಿತಾಯ ಮಾಡಬಲ್ಲ ಮಧ್ಯಮ ಹಾಗೂ ಮೇಲ್ವರ್ಗಗಳೂ ಇವೆ. ವಿನಿಯೋಜನೆಗೆ ಸರಿಯಾದ ಮಾರ್ಗಗಳಿಲ್ಲದೆ ಅಂಥವರ ಉಳಿತಾಯ ಅನುತ್ಪಾದಕ ಮಾರ್ಗಗಳತ್ತ ಹರಿದುಹೋಗುತ್ತಿದೆ. ನಗದು ಹಣದ ನಿಷ್ಪ್ರಯೋಜಕ ಸಂಗ್ರಹ, ಚಿನ್ನ, ಬೆಳ್ಳಿ ಹಾಗೂ ಜಮೀನು ಕಟ್ಟಡ ಮುಂತಾದ ಸ್ಥಿರಾಸ್ತಿಗಳಲ್ಲಿ ಹಣ ಹಾಕುವುದು—ಇದು ನಮ್ಮಲ್ಲಿ ಸಾಮಾನ್ಯ. ರಿಸರ್ವ್ ಬ್ಯಾಂಕಿನ ಒಂದು ಅಂದಾಜಿನಂತೆ ಭಾರತದ ಒಟ್ಟು ಉಳಿತಾಯದಲ್ಲಿ ಶೇ. 75 ಭಾಗ ಮೇಲೆ ಹೇಳಿದಂಥವೇ ಆಗಿವೆ.

ಇಂಥ ಪರಿಸ್ಥಿತಿಯಲ್ಲಿ ಸಾಧಾರಣ ವರಮಾನವುಳ್ಳ ಜನರ ಉಳಿತಾಯವನ್ನು ಒಟ್ಟುಗೂಡಿಸಿ ಅದನ್ನು ಉದ್ಯಮ ನಡೆಸಲು ಉಪಯೋಗಿಸುವುದಕ್ಕೆ ತಕ್ಕ ವಾತಾವರಣದ ನಿರ್ಮಾಣವಾಗಬೇಕಾಗುತ್ತದೆ. ಈ ಕಾರ್ಯದಲ್ಲಿ ಷೇರು ಪೇಟೆಯ ಪಾತ್ರ ಮಹತ್ವದ್ದು.

ಅರ್ಥವ್ಯವಸ್ಥೆಯಲ್ಲಿ ಷೇರು ಪೇಟೆಯ ಪಾತ್ರ ಹಾಗೂ ಷೇರು ಪೇಟೆಯ ಕೇಂದ್ರಬಿಂದುವಾದ ಷೇರುವಿನಿಮಯ ಕೇಂದ್ರದ ಸ್ವರೂಪ ಹಾಗೂ ಉದ್ದೇಶಗಳನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

### ಷೇರು ಪೇಟೆ

ವಿಸ್ತಾರವಾದ ವಿನಿಯೋಜಕ ವರ್ಗದ ಅಭಿರುಚಿ ಮತ್ತು ಸಾಮರ್ಥ್ಯಕ್ಕೆ ಸರಿಹೊಂದುವಂಥ—ವಿಭಿನ್ನ ಮೌಲ್ಯಗಳ, ವಿಭಿನ್ನ ಹಕ್ಕುಗಳ ಮತ್ತು ಮುಖ್ಯವಾಗಿ ನಷ್ಟಸಂಭವದ ವಿವಿಧ ಸ್ತರಗಳ–ಷೇರುಗಳು ಹಾಗೂ ಡಿಬೆಂಚರುಗಳಲ್ಲಿ ಹಣ ತೊಡಗಿಸುವ ಸೌಲಭ್ಯವನ್ನು ಷೇರು ಪೇಟೆ ಒದಗಿಸುತ್ತದೆ.

ದೊಡ್ಡ ಗಾತ್ರದಲ್ಲಿ ಉತ್ಪಾದಿಸುವ ಅತ್ಯಾಧುನಿಕ ಬೃಹತ್ ಉದ್ಯಮಗಳನ್ನು ಆರಂಭಿಸಲು ಕೇವಲ ಕೆಲವೇ ಮಂದಿ ಶ್ರೀಮಂತರಿಂದ ಬಂಡವಾಳ ಒದಗಿಬರುವುದು ಕಷ್ಟ. ಅಲ್ಲಿ ನಷ್ಟಸಂಭವ ಹೆಚ್ಚಾಗಿರುವುದರಿಂದ ಅದರ ಹೊರೆ ಕೆಲವೇ ಮಂದಿಯ ಮೇಲೆ ಬೀಳುವಂತಾಗುತ್ತದೆ. ಅಂಥ ಉದ್ಯಮಗಳ ಬಂಡವಾಳವನ್ನು ಸಾರ್ವಜನಿಕರಿಂದಲೇ ಒಟ್ಟುಗೂಡಿಸಿಕೊಳ್ಳಬೇಕಾಗುತ್ತದೆ. ಷೇರುದಾರರ ಹೊಣೆ ಅವರು ಹೊಂದಿರುವ ಷೇರಿನ ಅಂಕಿತ ಮೌಲ್ಯಕ್ಕೆ ಪರಿಮಿತವಾಗಿರುತ್ತದೆ. ಹೀಗಾಗಿ ನಷ್ಟಸಂಭವದ ಹೊರೆ ಅನೇಕ ವ್ಯಕ್ತಿಗಳಲ್ಲಿ ಹಂಚಿಹೋಗುತ್ತದೆ, ಅವರು ಹಾಕಿದ ಬಂಡವಾಳಕ್ಕೇ ಸೀಮಿತವಾಗಿರುತ್ತದೆ. ವೈಯಕ್ತಿಕ ಹೊಣೆಗಾರಿಕೆ ಇಲ್ಲದಂತಾಗುತ್ತದೆ.

ಒಮ್ಮೆ ಕೊಂಡ ಷೇರುಗಳನ್ನು ಯಾವುದೇ ಘಟ್ಟದಲ್ಲಿ ಇತರರಿಗೆ ವರ್ಗಾಯಿಸಬಹುದು. ಇದರಿಂದ ಷೇರುದಾರರ ಹಣ ನಿರ್ಬಂಧಿತವಾಗುವುದಿಲ್ಲ. ಇಂಥ ವರ್ಗಾವಣೆಯಿಂದ ಕಂಪನಿಗೂ ಯಾವ ರೀತಿಯ ಹಾನಿ ತಟ್ಟುವುದಿಲ್ಲ. ಏಕೆಂದರೆ ಷೇರನ್ನು ವರ್ಗಾಯಿಸಿದಾಗ ಷೇರುದಾರ ಬದಲಾಗುತ್ತಾನೆಯೇ ಹೊರತು ಕಂಪನಿಯ ಷೇರುಬಂಡವಾಳ ಇದ್ದಂತೆಯೇ ಇರುತ್ತದೆ. ಹೀಗೆ, ಕಂಪನಿಯಲ್ಲಿ ಹಣ ವಿನಿಯೋಜಿಸಿದ ಷೇರುದಾರ ತನಗೆ ಇಷ್ಟ ಬಂದಾಗ ಪೇಟೆಯಲ್ಲಿ ಷೇರುಗಳನ್ನು ಮಾರಿ ತನ್ನ ಹಣವನ್ನು ಹಿಂದೆ ಪಡೆಯುವ ಸಾಧ್ಯತೆ ಇರುವುದರಿಂದ ಎರಡು ಅನುಕೂಲತೆಗಳುಂಟು: ಹೂಡಿಕೆದಾರನಿಗೆ ಅಲ್ಪಾವಧಿ ಹೂಡಿಕೆಯ ಹಾಗೂ ದ್ರವತ್ವದ ಸೌಲಭ್ಯ ಮತ್ತು ಒಟ್ಟು ಅರ್ಥವ್ಯವಸ್ಥೆಗೆ ದೀರ್ಘಾವಧಿ ಹೂಡಿಕೆಯ ಸೌಲಭ್ಯ.

ಅರ್ಥವ್ಯವಸ್ಥೆಗೆ ಮತ್ತು ಹಣ ವಿನಿಯೋಜಿಸುವ ಸಾರ್ವಜನಿಕರಿಗೆ ಈ ಸೌಲಭ್ಯಗಳು ದೊರೆಯಬೇಕಾದರೆ ಷೇರು ಪೇಟೆ ವ್ಯವಸ್ಥಿತವಾಗಿರಬೇಕು. ಇಲ್ಲದಿದ್ದರೆ ಸಾರ್ವಜನಿಕರು ಷೇರುಗಳನ್ನು ಕೊಳ್ಳಲು ಮುಂದಾಗಲಾರರು.

### ಬಂಡವಾಳ ಪತ್ರ ವಿನಿಮಯ ಕೇಂದ್ರಗಳು

ಷೇರುಪೇಟೆಯನ್ನು ವ್ಯವಸ್ಥಿತಗೊಳಿಸುವ ಉದ್ದೇಶವುಳ್ಳ ಬಂಡವಾಳ ಪತ್ರ ವಿನಿಮಯ ಕೇಂದ್ರ ಅಥವಾ 'ಸ್ಟಾಕ್

ಎಕ್ಸ್‌ಚೇಂಜ್'ಗಳು ಎಲ್ಲ ರೀತಿಯ ಅರ್ಥವ್ಯವಸ್ಥೆಗಳಲ್ಲೂ ಸ್ಥಾಪಿಸಲ್ಪಟ್ಟಿವೆ.

'ಬಂಡವಾಳ ಪತ್ರ ವಿನಿಮಯ ಕೇಂದ್ರ'ವನ್ನು ಷೇರುಗಳು, ಬಂಡವಾಳ ಪತ್ರಗಳು ಮತ್ತು ಬಾಂಡುಗಳ ಬಿಕರಿ ಹಾಗೂ ಖರೀದಿಗಾಗಿ ಇರುವ ವ್ಯವಸ್ಥಿತ ಮಾರುಕಟ್ಟೆ ಎನ್ನಬಹುದು.

ಅರ್ಥವ್ಯವಸ್ಥೆಯಲ್ಲಿ ಷೇರು ಪೇಟೆ ತನ್ನ ಪ್ರಭಾವ ಬೀರುತ್ತಿದ್ದರೆ, ಷೇರು ಪೇಟೆಯ ಕೇಂದ್ರಬಿಂದುವಾದ ವಿನಿಮಯ ಕೇಂದ್ರ ಷೇರು ಪೇಟೆಯನ್ನು ವ್ಯವಸ್ಥಿತಗೊಳಿಸಲು ಯತ್ನಿಸುತ್ತದೆ.

## ವಿನಿಮಯ ಕೇಂದ್ರದ ಸ್ವರೂಪ

ಬಂಡವಾಳ ಪತ್ರ ವಿನಿಮಯ ಕೇಂದ್ರ ನಿರ್ದಿಷ್ಟವಾದ ಸ್ಥಳವೊಂದರಲ್ಲಿ ನಿರ್ದಿಷ್ಟವಾದ ವ್ಯವಹಾರ ವೇಳೆಯಲ್ಲಿ ಕೆಲಸ ಮಾಡುತ್ತದೆ. ಷೇರು ಪೇಟೆಯ ಎಲ್ಲ ವಹಿವಾಟುಗಳೂ ವಿನಿಮಯಕೇಂದ್ರದಲ್ಲೇ ಆಗಬೇಕೆಂದಿಲ್ಲ. ವಾಸ್ತವವಾಗಿ ಕೇಂದ್ರದಲ್ಲಿ ನಡೆಯುವ ವಹಿವಾಟುಗಳು ಒಟ್ಟು ವಹಿವಾಟುಗಳ ಸಂಖ್ಯೆಗೆ ಹೋಲಿಸಿದರೆ ಅತಿ ಸ್ವಲ್ಪ.

ಬಂಡವಾಳಪತ್ರ ವಿನಿಮಯ ಕೇಂದ್ರದ ಕಲಾಪಗಳು ಅದರ ಸದಸ್ಯರ ಮೂಲಕ ನಡೆಯುತ್ತವೆ. ಷೇರುಗಳ ವ್ಯಾಪಾರ ಹಲವು ವಿಧದಲ್ಲಿ ನಡೆಯಬಹುದಾದರೂ, ಸದಸ್ಯರ ನಡುವೆ ಹರಾಜು ಮೂಲಕ ಷೇರುಗಳ ಬೆಲೆ ನಿರ್ಧರಿಸಲ್ಪಡುವುದು ಸಾಮಾನ್ಯ.

ಕೇಂದ್ರದ ಸದಸ್ಯತ್ವ ಒಂದೊಂದು ದೇಶದಲ್ಲಿ ಒಂದೊಂದು ರೀತಿಯಾಗಿರುತ್ತದೆ. ಸದಸ್ಯರ ಸಂಖ್ಯೆ, ಷೇರುಪೇಟೆಯಲ್ಲಿ ಬ್ಯಾಂಕುಗಳ ಪಾತ್ರ ಹಾಗೂ ಸದಸ್ಯತ್ವಕ್ಕೆ ನಿಗದಿಪಡಿಸಲಾದ ಅರ್ಹತೆಗಳು ಮುಂತಾದ ಅಂಶಗಳಲ್ಲಿ ವ್ಯತ್ಯಾಸಗಳಿರುತ್ತವೆ. ಷೇರುವಿನಿಮಯ ಕೇಂದ್ರದ ವ್ಯವಸ್ಥಾಪನೆಯಲ್ಲಿ ಸರಕಾರದ ಹಸ್ತಕ್ಷೇಪ ಎಷ್ಟಿದೆ ಎಂಬುದೂ ವ್ಯತ್ಯಾಸಕ್ಕೆ ಒಂದು ಕಾರಣ. ಲಂಡನ್ ಸ್ಟಾಕ್ ಎಕ್ಸ್‌ಚೇಂಜ್ ಸರಕಾರದ ಶಾಸನದಿಂದ ಮುಕ್ತವಾಗಿದ್ದರೆ, ಅಮೆರಿಕ ಸಂಯುಕ್ತ ಸಂಸ್ಥಾನಗಳ ಸ್ಟಾಕ್ ಎಕ್ಸ್‌ಚೇಂಜ್‌ಗಳಲ್ಲಿ ನೇರವಾಗಿ ಸರಕಾರದ ಹಸ್ತಕ್ಷೇಪವಿರದಿದ್ದರೂ ಹಲವು ಶಾಸನ ನಿಯಂತ್ರಣಗಳಿವೆ. ಭಾರತದಲ್ಲಿ ಸರಕಾರದ ಅಧಿಕಾರಿಯೊಬ್ಬ ಷೇರುವಿನಿಮಯ ಕೇಂದ್ರದ ವ್ಯವಹಾರವನ್ನು ಪರಿವೀಕ್ಷಿಸುತ್ತಾನೆ. ಭಾರತದ ಸಂವಿಧಾನದಂತೆ ಷೇರುವಿನಿಮಯ ಕೇಂದ್ರಗಳು ಕೇಂದ್ರ ಸರಕಾರಕ್ಕೆ ಸಂಬಂಧಿಸಿದ ವಿಷಯವಾಗಿದೆ, ಷೇರು ವಿನಿಮಯ ಕೇಂದ್ರಗಳ ವ್ಯವಹಾರವನ್ನು ನಿಯಂತ್ರಿಸಲು 1956ರ ಪ್ರತಿಭೂತಿ ಕರಾರುಗಳ (ರೆಗ್ಯುಲೇಷನ್) ಅಧಿನಿಯಮ ಜಾರಿಯಲ್ಲಿದೆ.

ಸರಕಾರ ವಿನಿಮಯ ಕೇಂದ್ರವನ್ನು ಅಂಗೀಕರಿಸುವುದಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದಲ್ಲಿ ಹಲವು ವಿಧಿಗಳಿವೆ :

1 ವ್ಯವಹಾರಗಳು ನಿಷ್ಪಕ್ಷಪಾತವಾಗಿರುವಂತೆಯೂ ವಿನಿಯೋಜಕರಿಗೆ ರಕ್ಷಣೆ ನೀಡುವಂತೆಯೂ ಷೇರು ವಿನಿಮಯ ಕೇಂದ್ರದ ನಿಯಮ ನಿಬಂಧನೆಗಳು ರೂಪಿಸಲ್ಪಟ್ಟಿರಬೇಕು.

2 ಷೇರು ವಿನಿಮಯ ಕೇಂದ್ರಗಳು ಸರಕಾರದ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

3 ವ್ಯಾಪಾರದ ಮತ್ತು ಸಾರ್ವಜನಿಕರ ಹಿತದೃಷ್ಟಿಯಿಂದ ಮಾತ್ರ ಸರಕಾರದ ಅಂಗೀಕಾರ ನೀಡಲ್ಪಡುತ್ತದೆ.

ಭಾರತದಲ್ಲಿ ಒಂಬತ್ತು ಅಧಿಕೃತ ಬಂಡವಾಳಪತ್ರ ವಿನಿಮಯ ಕೇಂದ್ರಗಳಿವೆ. ಇವು ಮುಂಬೈ, ಕಲ್ಕತ್ತ, ದೆಹಲಿ, ಮದರಾಸು, ಅಲಹಾಬಾದ್, ಹೈದರಾಬಾದ್, ಇಂದೂರು, ಬೆಂಗಳೂರು ಮತ್ತು ಪೂನಾದಲ್ಲಿದೆ.

## ವಿನಿಮಯ ಕೇಂದ್ರದ ಕಾರ್ಯವಿಧಾನ

ವಿನಿಮಯ ಕೇಂದ್ರ ಅನೇಕ ಕಂಪನಿಗಳನ್ನು ತನ್ನ ಪಟ್ಟಿಯಲ್ಲಿ ನೋಂದಾಯಿಸಿಕೊಂಡಿರುತ್ತದೆ. ಹೀಗೆ ನೋಂದಾಯಿಸಿಕೊಳ್ಳಬೇಕಾದರೆ ಕಂಪನಿಯೊಂದಕ್ಕೆ ಇರಬೇಕಾದ ಹಲವು ಅರ್ಹತೆಗಳನ್ನು ಅದು ನಿಗದಿಪಡಿಸುತ್ತದೆ. ಪಟ್ಟಿಗೆ ಸೇರಿದ ಕಂಪನಿಗಳ ಪ್ರತಿಭೂತಿಗಳ ದರಗಳನ್ನು ಮಾತ್ರ ಕೇಂದ್ರ ಉಲ್ಲೇಖಿಸುತ್ತದೆ. ಅಂಥ ಕಂಪನಿಗಳು ಪ್ರತಿ ವರ್ಷವೂ ಲೆಕ್ಕಪರಿಶೋಧಕರಿಂದ ಪ್ರಮಾಣೀಕೃತವಾದ ಆಸ್ತಿ ಹೊಣೆ ತಃಖ್ತೆಯನ್ನೂ ತಮ್ಮ ಕಾರ್ಯಚಟುವಟಿಕೆಗಳ ಬಗ್ಗೆ ವಿವರಣೆಯನ್ನೂ ವಿನಿಮಯ ಕೇಂದ್ರಕ್ಕೆ ಒದಗಿಸಬೇಕು. ಇಂತಹ ವಿವರಗಳನ್ನು ವಿನಿಮಯ ಕೇಂದ್ರವು ಸಾರ್ವಜನಿಕರ ಮುಂದೆ ಇಡಬೇಕು. ಆಗ ಕಂಪನಿಯ ಆರ್ಥಿಕ ಸ್ಥಿತಿಯ ಬಗ್ಗೆ ಸಾರ್ವಜನಿಕರಿಗೆ ಸ್ಪಷ್ಟ ತಿಳಿವಳಿಕೆ ಮೂಡುತ್ತದೆ.

ವಿನಿಮಯ ಕೇಂದ್ರದ ಸದಸ್ಯರಲ್ಲಿ ಬಹುತೇಕ ಮಂದಿ ಷೇರು ದಳ್ಳಾಳಿಗಳೇ. ಈ ದಳ್ಳಾಳಿಗಳು ವಿನಿಮಯ ಕೇಂದ್ರದ ಹೊರಗೇ ಷೇರುಗಳ ಮಾರಾಟ ಖರೀದಿ ನಡೆಸುತ್ತಾರೆ. ಹೀಗೆ ವಿನಿಮಯ ಕೇಂದ್ರದ ಹೊರಗೆ ತಾನು ನಡೆಸಿದ ವಹಿವಾಟುಗಳ ಸಮಗ್ರ ವರದಿಯನ್ನು ಪ್ರತಿಯೊಬ್ಬ ಸದಸ್ಯನೂ ವಾರಕ್ಕೊಮ್ಮೆ ಕೇಂದ್ರಕ್ಕೆ ಸಲ್ಲಿಸಬೇಕು.

ವಿನಿಮಯ ಕೇಂದ್ರದಲ್ಲಿ ಒಂದು ವಹಿವಾಟು (ಒಂದು ಕಂಪನಿಯ ಷೇರುಗಳ ಮಾರಾಟ ಅಥವಾ ಖರೀದಿ) ನಡೆಯಬೇಕಾದರೆ ಆ ವಹಿವಾಟಿನಲ್ಲಿ ಕನಿಷ್ಠ ಇಷ್ಟು ಷೇರುಗಳಿರಬೇಕು ಎಂದು ನಿಗದಿಯಾಗಿರುತ್ತದೆ. ಈ ಸಂಖ್ಯೆ ಒಂದು ಕಂಪನಿಯ ಷೇರಿಗೂ ಇನ್ನೊಂದು ಕಂಪನಿಯ ಷೇರಿಗೂ ವ್ಯತ್ಯಾಸವಾಗುತ್ತದೆ. ಇದನ್ನು 'ಮಾರಾಟ ಸಾಧ್ಯ ರಾಶಿ' ಅಥವಾ ಮಾರ್ಕೆಟಬಲ್ ಲಾಟ್ಸ್ ಎನ್ನುತ್ತಾರೆ. ಇದಕ್ಕಿಂತ ಕಡಿಮೆ ಸಂಖ್ಯೆಯ ಷೇರುಗಳ ಮಾರಾಟ ಅಥವಾ ಖರೀದಿಗಳೇನಿದ್ದರೂ ವಿನಿಮಯ ಕೇಂದ್ರದ ಹೊರಗೇ ನಡೆಯಬೇಕು. ಸಾಮಾನ್ಯವಾಗಿ ಇಂಥ ಚಿಲ್ಲರೆ ವಹಿವಾಟುಗಳಲ್ಲಿ ಮಾರಾಟದಾರರಿಗೆ ಕಡಮೆ ದರ ದೊರೆಯುತ್ತದೆ.

ಸಾರ್ವಜನಿಕರು ವಿನಿಮಯ ಕೇಂದ್ರದಲ್ಲಿ ನೇರವಾಗಿ ಯಾವುದೇ ಕಂಪನಿಯ ಷೇರಿನ ಮಾರಾಟ ಅಥವಾ ಖರೀದಿ ಮಾಡುವಂತಿಲ್ಲ. ಅವರು ಕೇಂದ್ರದ ಸದಸ್ಯತ್ವ ಹೊಂದಿದ ದಳ್ಳಾಳಿಗಳ ಮೂಲಕವೇ ವ್ಯವಹರಿಸಬೇಕು. ತಮ್ಮ ಸೇವೆಗೆ ದಳ್ಳಾಳಿಗಳು ಸಾಕಷ್ಟು ಪ್ರತಿಫಲ ಪಡೆಯುತ್ತಾರೆ. ಈ ಪ್ರತಿಫಲದ ಮೊತ್ತಕ್ಕೂ ವಹಿವಾಟಿನಲ್ಲಿ ನಿರ್ಧರಿತವಾದ ಷೇರಿನ ದರಕ್ಕೂ ಸಂಬಂಧವಿಲ್ಲ. ದಳ್ಳಾಳಿಗಳು ಮಾರಾಟ ದಾರ ಹಾಗೂ ಖರೀದಿದಾರ ಇಬ್ಬರಿಂದಲೂ ತಮ್ಮ ದಳ್ಳಾಳಿ ಯನ್ನು ವಸೂಲು ಮಾಡಿಕೊಳ್ಳುತ್ತಾರೆ.

ಕಂಪನಿಯೊಂದರ ಷೇರನ್ನು ಹೊಂದಿದವ ಷೇರಿನ ಮುಖಬೆಲೆಯ ಮಟ್ಟಿಗೆ ಆ ಕಂಪನಿಯ ಮಾಲೀಕತ್ವವನ್ನು ಹೊಂದಿದಂತೆ ಕಂಪನಿಯ ಬಗೆಗೆ ಹಲವು ರೀತಿಯ ನಿರ್ಧಾರ ಕೈಗೊಳ್ಳುವಲ್ಲಿ ಅವನ ಪಾತ್ರ ಅಲ್ಪಸ್ವಲ್ಪವಾದರೂ ಇರು ತ್ತದೆ. ಇನ್ನು ಕಂಪನಿಯ ಲಾಭ ನಷ್ಟಗಳಂತೂ ಅವನು ವಿನಿಯೋಜಿಸಿದ ಮೊತ್ತಕ್ಕೆ ಅನುಗುಣವಾಗಿ ಅವನ ತಲೆಗೆ ಕಟ್ಟಿದ್ದೇ. ಆದ್ದರಿಂದ ಕಂಪನಿಯ ಆಗುಹೋಗುಗಳ ಬಗ್ಗೆ ವಿನಿಯೋಜಕರು ಅನೇಕ ಅಂಶಗಳನ್ನು ತಿಳಿದಿರಬೇಕಾಗು ತ್ತದೆ. ಆರ್ಥಿಕಸ್ಥಿತಿಯಲ್ಲಿನ ಬದಲಾವಣೆಗಳು, ಕಂಪನಿಗೆ ಸಂಬಂಧಿಸಿದ ನಿರ್ದಿಷ್ಟ ಕೈಗಾರಿಕೆಯಲ್ಲಿನ ಬೆಳವಣಿಗೆಗಳು, ಆಳುವ ಸರಕಾರದ ಧೋರಣೆಗಳು, ಅರ್ಥ ನೀತಿ ಮುಂತಾದ ಅನೇಕ ಅಂಶಗಳನ್ನು ವಿನಿಯೋಜಕರು ನಿರಂತರವಾಗಿ ಪರಿಶೀಲಿಸುತ್ತಲೇ ಇರಬೇಕಾಗುತ್ತದೆ. ವಿನಿಯೋಜಕರಿಗೆ ಮಾರ್ಗದರ್ಶನದ ಆವಶ್ಯಕತೆ ಇದೆ. ವಿವಿಧ ಕಂಪನಿಗಳಲ್ಲಿ ವಿನಿಯೋಜನೆ ಮಾಡಿದರೆ ಉಂಟಾಗಬಹುದಾದ ಲಾಭ ನಷ್ಟಗಳನ್ನು ವಿವರಿಸುವ ಪತ್ರಿಕೆಗಳು ಹಲವಾರು ಇವೆ. ಪ್ರಚಲಿತ ಆರ್ಥಿಕಸ್ಥಿತಿಯ ಬಗೆಗೆ ಪತ್ರಿಕೆಗಳಲ್ಲಿ ಅನೇಕ ವಿಷಯಗಳು ಪ್ರಕಟವಾಗುತ್ತಿರುತ್ತವೆ. ಇದಲ್ಲದೆ ಷೇರು ವಿನಿಮಯ ಕೇಂದ್ರದಲ್ಲಿ ಪ್ರತಿದಿನ ನಡೆದ ವಹಿವಾಟುಗಳನ್ನು ಕುರಿತ ವಿವರಗಳನ್ನು ಕೇಂದ್ರವು ಪತ್ರಿಕೆಗಳಿಗೆ ಬಿಡುಗಡೆ ಮಾಡುತ್ತದೆ. ವಿನಿಯೋಜಕರು ಇವೆಲ್ಲದರ ಉಪಯೋಗ ವನ್ನು ಪಡೆದುಕೊಳ್ಳಬಹುದು.

### ಹತೋಟಿ

ವಿನಿಮಯ ಕೇಂದ್ರದ ಸದಸ್ಯರು ತಮ್ಮ ಸ್ವಂತ ಕ್ಕಾಗಿ ಷೇರುಗಳನ್ನು ಕೊಳ್ಳುವುದರ ಬಗೆಗೆ ವಿನಿಮಯ ಕೇಂದ್ರದ ಷರತ್ತುಗಳಿವೆ. ಸದಸ್ಯರು ತಮ್ಮ ಸ್ವಂತಕ್ಕೆ ಕೊಳ್ಳ ಬಹುದಾದ ಮಾರಬಹುದಾದ ಷೇರುಗಳ ಸಂಖ್ಯೆಯನ್ನು ಕೇಂದ್ರವು ಒಂದು ಮಿತಿಗೆ ಒಳಪಡಿಸುತ್ತದೆ. ಇದರಿಂದ ಸದಸ್ಯರು ಸಟ್ಟಾ ವ್ಯವಹಾರದಲ್ಲಿ ತೊಡಗುವುದನ್ನು ತಪ್ಪಿಸಲು ಸ್ವಲ್ಪಮಟ್ಟಿಗೆ ಸಹಾಯವಾಗುತ್ತದೆ. ಇಂತಹ ನಿಯಮ ಇಲ್ಲದಿದ್ದರೆ ಸದಸ್ಯರು ಮಿಥ್ಯಾವಹಿವಾಟುಗಳನ್ನು ನಡೆಸಿ ಪ್ರತಿಭೂತಿಗಳ ಮೌಲ್ಯವನ್ನು ಕುರಿತು ಸಾರ್ವಜನಿಕ ರಲ್ಲಿ ತಪ್ಪು ಅಭಿಪ್ರಾಯ ಮೂಡಿಸಿ ಅವರನ್ನು ಮೋಸ ಪಡಿಸಲು ಸಾಧ್ಯವಾಗುತ್ತದೆ.

### ತೇಜಿ ಹಾಗೂ ಮಂದಿ ವಹಿವಾಟುದಾರರು

ಷೇರೊಂದರ ಬೆಲೆ ಇನ್ನೂ ಹೆಚ್ಚುವುದೆಂಬ ನಿರೀಕ್ಷೆ ಯಿಂದ ಅದಕ್ಕೆ ಹೆಚ್ಚು ದರ ಕೊಟ್ಟು ಕೊಳ್ಳುವವನನ್ನು ತೇಜಿ ವಹಿವಾಟುದಾರ ಎಂದೂ ಷೇರಿನ ಬೆಲೆ ಕುಗ್ಗು ವುದೆಂಬ ಭಯದಿಂದ ಅದನ್ನು ಕಡಿಮೆ ದರದಲ್ಲಿ ಮಾರಾಟ ಮಾಡುವವನನ್ನು ಮಂದಿ ವಹಿವಾಟುದಾರ ಎಂದೂ ಹೇಳ ಲಾಗುತ್ತದೆ. ಈ ಎರಡೂ ಬಗೆಯ ವಹಿವಾಟುಗಳೂ ಸಟ್ಟಾ ವ್ಯವಹಾರವೇ. ಲಾಭದ ಆಶೆ ,ನಷ್ಟದ ಭೀತಿ ಇವು ವಿನಿಯೋಜಕರಿಗೆ ಸಹಜವಾದವೆಂಬುದನ್ನು ಒಪ್ಪಬಹುದು. ಈ ಸಟ್ಟಾ ಮನೋಭಾವ ಒಂದು ಮಿತಿಯಲ್ಲಿದ್ದರೆ ತೊಂದರೆಯಾಗಲಾರದು. ಆದರೆ ಷೇರು ಮಾರುಕಟ್ಟೆಯಲ್ಲಿ ಸಟ್ಟಾ ಮನೋಭಾವ ಸಾಂಕ್ರಾಮಿಕ ರೋಗದಂತೆ ಹಬ್ಬಿ ದಾಗ ಷೇರುಗಳ ಬೆಲೆಯಲ್ಲಿ ವೈಪರೀತ್ಯಗಳುಂಟಾಗುತ್ತವೆ. ಅನೇಕ ಮುಗ್ಧ ವಿನಿಯೋಜಕರಿಗೆ ಹಾನಿಯುಂಟಾಗುವುದೇ ಅಲ್ಲದೆ, ದೀರ್ಘಕಾಲಿಕ ದೃಷ್ಟಿಯಿಂದ ಷೇರುಗಳಲ್ಲಿ ವಿನಿಯೋಜನೆಯಾಗುವ ಹಣ ಕಡಮೆಯಾಗುತ್ತದೆ. ಅತಿ ಲಾಭದ ಆಶೆ ತೋರುವ ಕೈಗಾರಿಕೆಗಳತ್ತಲೇ ಹಣ ಹರಿಯು ತ್ತದೆ. ಉಳಿದ ಕೈಗಾರಿಕೆಗಳು ಬಂಡವಾಳ ದೊರೆಯದೆ ಸೊರಗುತ್ತವೆ. ಇಡೀ ಅರ್ಥವ್ಯವಸ್ಥೆ ಹದಗೆಡುತ್ತದೆ. ಪ್ರಪಂಚದ ಷೇರುಪೇಟೆಗಳ ಚರಿತ್ರೆಯಲ್ಲಿ ಇಂಥ ಹಲವಾರು ದುರದೃಷ್ಟಕರ ಪ್ರಸಂಗಗಳು ನಡೆದಿವೆ.

### ವಿನಿಮಯ ಕೇಂದ್ರದ ಉದ್ದೇಶಗಳು

ಷೇರು ಪೇಟೆಯನ್ನು ವ್ಯವಸ್ಥಿತಗೊಳಿಸುವಲ್ಲಿ ಷೇರು ವಿನಿಮಯ ಕೇಂದ್ರದ ಪಾತ್ರ ಮಹತ್ವದ್ದು.

ಹಲವಾರು ಉದ್ಯಮಿಗಳ ಕಲ್ಪನಾಶಕ್ತಿ ಕರ್ತೃತ್ವಶಕ್ತಿ ಗಳು, ಬಹುಸಂಖ್ಯೆಯ ವಿನಿಯೋಜಕರ ಹಣ ಮತ್ತು ನುರಿತ ವ್ಯವಸ್ಥಾಪನ ವರ್ಗದವರ ಆಡಳಿತ ಸಾಮರ್ಥ್ಯ ಇವುಗಳ ಸಂಯೋಗದಿಂದ ಅರ್ಥವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಷೇರುವಿನಿಮಯ ಕೇಂದ್ರ ನೆರವಾಗುತ್ತದೆ.

ಷೇರು ಪೇಟೆಯ ವ್ಯವಹಾರ ಉದ್ಯಮಪತಿಗಳಿಗೆ ಮಾತ್ರವೇ ಅಲ್ಲ ; ಯಾವುದೇ ಉದ್ಯಮವನ್ನು ಸ್ವಂತವಾಗಿ ನಿರ್ವಹಿಸುವ ಬಗ್ಗೆ ಕನಸಿನಲ್ಲೂ ಆಲೋಚಿಸಲು ಸಾಧ್ಯವಾಗ ದಂತಹ ಮಧ್ಯಮ ವರ್ಗದ ಅನೇಕರೂ ಷೇರುಪೇಟೆಯ ವ್ಯವಹಾರದಲ್ಲಿ ತೊಡಗಬಹುದು. ಬ್ಯಾಂಕುಗಳು, ಭಾರತದ ಯೂನಿಟ್ ಟ್ರಸ್ಟ್, ಪ್ರಾದೇಶಿಕ ಭವಿಷ್ಯನಿಧಿ ಸಂಸ್ಥೆ ಮುಂತಾದವು ಕೂಡ ಷೇರುಪೇಟೆಯಲ್ಲಿ ಹಣ ವಿನಿಯೋಜನೆ ಮಾಡುತ್ತವೆ. ಆದ್ದರಿಂದ ಆಯಾ ಸಂಸ್ಥೆಗಳಲ್ಲಿ ಹಣ ಠೇವಣಿ ಮಾಡುವ ಸಾರ್ವಜನಿಕರೂ ಪರೋಕ್ಷವಾಗಿ ತಮ್ಮ ಹಣ ವನ್ನು ಷೇರು ವ್ಯವಹಾರಗಳಲ್ಲಿ ತೊಡಗಿಸಿದಂತಾಗುತ್ತದೆ.

ಷೇರು ವಿನಿಮಯ ಕೇಂದ್ರ ಹಲವಾರು ಪ್ರಶಂಸನೀಯ ಉದ್ದೇಶಗಳನ್ನು ಇಟ್ಟುಕೊಂಡಿರುತ್ತದೆ. ಅವುಗಳಲ್ಲಿ ಮುಖ್ಯವಾದವನ್ನು ಪರಿಶೀಲಿಸಬಹುದು.

1 ಇರುವ ಪ್ರತಿಭೂತಿಗಳಿಗೆ ಸಾಕಷ್ಟು ಮಾರುಕಟ್ಟೆ ಹಾಗೂ ಅವುಗಳ ಬೆಲೆಯಲ್ಲಿ ಸಾಧ್ಯವಾದಷ್ಟು ಸ್ಥಿರತೆ ಇರುವಂತೆ ನೋಡಿಕೊಳ್ಳುವುದು.

2 ಪ್ರತಿಭೂತಿಗಳ ಬೆಲೆಗಳನ್ನು ಅವುಗಳ ವಿನಿಯೋಜನೆಯ ಮೌಲ್ಯಗಳಿಗೆ ಆದಷ್ಟು ಹತ್ತಿರವಿರುವಂತೆ ನಿಗದಿಪಡಿಸುವುದು.

3 ತನ್ನ ವ್ಯವಹಾರಗಳಲ್ಲಿ ನಿಷ್ಪಕ್ಷಪಾತ ವರ್ತನೆಯನ್ನು ತೋರುವುದು ಮತ್ತು ವಿನಿಯೋಜಕರಿಗೆ ರಕ್ಷಣೆಯನ್ನು ನೀಡುವುದು.

4 ಅತ್ಯಂತ ಉತ್ಪಾದಕ ಕ್ಷೇತ್ರಗಳಿಗೆ ಸಾರ್ವಜನಿಕ ಉಳಿತಾಯವು ಹರಿದುಬರುವಂತೆ ಪ್ರೇರೇಪಿಸುವುದು.

ಈ ಉದ್ದೇಶಗಳು ಈಡೇರಬೇಕಾದರೆ ವಿನಿಮಯ ಕೇಂದ್ರದಲ್ಲಿ ಪಟ್ಟಭದ್ರಹಿತಾಸಕ್ತಿಗಳಿಗೆ ಎಡೆಯಿರಬಾರದು. ಮುಂದುವರಿದ ರಾಷ್ಟ್ರಗಳಲ್ಲಿ ಕೆಲಸ ಮಾಡುವ ವಿನಿಮಯ ಕೇಂದ್ರಗಳಿಂದ, ಷೇರುಪೇಟೆಗಳ ಇತಿಹಾಸದಿಂದ ಅಭಿವೃದ್ಧಿಶೀಲ ರಾಷ್ಟ್ರಗಳ ವಿನಿಮಯ ಕೇಂದ್ರಗಳು ಪಾಠ ಕಲಿಯಬೇಕು.

## ಮಾರುಕಟ್ಟೆ ಮತ್ತು ಬೆಲೆಯ ಸ್ಥಿರತೆ

ಬಂಡವಾಳ ಪತ್ರ ವಿನಿಮಯ ಕೇಂದ್ರದಲ್ಲಿ ಷೇರೊಂದಕ್ಕೆ ಹಿಂದೆ ಪ್ರಕಟಿಸಿದ ದರಕ್ಕೂ ಮುಂದಿನ ದರಗಳಿಗೂ ತುಲನಾತ್ಮಕವಾಗಿ ಸ್ವಲ್ಪವೇ ವ್ಯತ್ಯಾಸವಿರಬೇಕು. ಹೀಗೆ ಷೇರುದರಗಳಲ್ಲಿಸ್ಥಿರತೆಯಿದ್ದರೆ ವಿನಿಯೋಜಕರು ತಮಗೆ ಬೇಕೆನಿಸಿದಾಗ ತಮ್ಮ ವಿನಿಯೋಜನೆಯನ್ನು ಹಿಂತೆಗೆದುಕೊಳ್ಳಲು ಅನುಕೂಲವಾಗುತ್ತದೆ. ತಮ್ಮ ವಿನಿಯೋಜನೆಯ ದ್ರವತ್ವದ ಬಗ್ಗೆ ವಿಶ್ವಾಸ ಹೆಚ್ಚಿದಂತೆ ವಿನಿಯೋಜಕರು ಸಮಾಧಾನಚಿತ್ತರಾಗಿ ಸ್ವಸಂತೋಷದಿಂದ ನಷ್ಟ ಜವಾಬ್ದಾರಿಯನ್ನು ಸ್ವೀಕರಿಸುತ್ತಾರೆ. ಹಾಗಲ್ಲದೆ ಷೇರುಬೆಲೆಗಳಲ್ಲಿ ಸಿಕ್ಕಾಬಟ್ಟೆ ಏರಿಳಿತಗಳಿದ್ದರೆ ವಿನಿಯೋಜಕರ ಆತಂಕ ಹೆಚ್ಚಿ, ಅವರು ತಮ್ಮಲ್ಲಿ ಇರುವ ಷೇರುಗಳನ್ನು ವಿಲೇವಾರಿ ಮಾಡಲು ಚಡಪಡಿಸುತ್ತಾರೆ ಹಾಗೂ ಹೊಸದಾಗಿ ಹಣ ವಿನಿಯೋಜನೆಮಾಡಲು ಹಿಂದೇಟು ಹಾಕುತ್ತಾರೆ.

## ಪ್ರತಿಭೂತಿಗಳ ಮೌಲ್ಯಮಾಪನ

ಪ್ರತಿಭೂತಿಗಳ ಮೌಲ್ಯಮಾಪನ ಕಾರ್ಯ ವೈಜ್ಞಾನಿಕವಾಗಿ ನಡೆಯಬೇಕು. ಷೇರುದರಗಳು ವಿನಿಯೋಜನೆಯ ನಿಜವಾದ ಯೋಗ್ಯತೆಯನ್ನು ಪ್ರತಿಬಿಂಬಿಸಬೇಕು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಅವು ವಿನಿಯೋಜನೆಯ ಬಂಡವಾಳ ಮೌಲ್ಯಕ್ಕೆ ತಾಳೆಯಾಗುವಂತಿರಬೇಕು. ಹೀಗಾಗಬೇಕಾದರೆ ಎಲ್ಲ ಕ್ಷೇತ್ರಗಳಿಂದಲೂ ಖರೀದಿದಾರರನ್ನು ಷೇರುಪೇಟೆಗೆ ಆಕರ್ಷಿಸಬೇಕು. ವಿವಿಧ ಕಂಪನಿಗಳ ಸ್ಥಿತಿಗತಿ ಕುರಿತ ಸಂಪೂರ್ಣ ಮಾಹಿತಿಯನ್ನು ಸಾರ್ವಜನಿಕರಿಗೆ ಒದಗಿಸಬೇಕು. ಆಗ ಖರೀದಿದಾರರು ಸ್ಪಷ್ಟ ತಿಳಿವಳಿಕೆಯೊಂದಿಗೆ ವಹಿವಾಟು ನಡೆಸಲು ಸಾಧ್ಯವಾಗುತ್ತದೆ. ಷೇರು ಪೇಟೆಯಲ್ಲಿ ಆರೋಗ್ಯಕರ ಪೈಪೋಟಿ ಏರ್ಪಟ್ಟು ವಿನಿಯೋಜನೆಯ ಬೆಳವಣಿಗೆಗೆ ಸಹಾಯಕವಾಗುತ್ತದೆ. ಇಲ್ಲದಿದ್ದರೆ ಷೇರುಪೇಟೆ ಹಲವೇ ವ್ಯಕ್ತಿಗಳ—ಮುಖ್ಯವಾಗಿ ಷೇರು ದಳ್ಳಾಳಿಗಳ—ಹಿಡಿತಕ್ಕೆ ಸಿಕ್ಕಿ ಜೂಜುಕಟ್ಟೆಯಾಗುತ್ತದೆ.

ಪ್ರತಿಭೂತಿಗಳ ನಿಖರವಾದ ಮೌಲ್ಯಮಾಪನದಿಂದ ವಿನಿಯೋಜಕರಿಗೆ ಅನುಕೂಲವಾಗುವುದಲ್ಲದೆ ತೆರಿಗೆ ಅಧಿಕಾರಿಗಳಿಗೂ, ಷೇರುಗಳ ಮೇಲೆ ಸಾಲ ನೀಡುವ ಬ್ಯಾಂಕುಗಳೇ ಮೊದಲಾದ ಉದರಿ ಸಂಸ್ಥೆಗಳಿಗೂ ಅನುಕೂಲವಾಗುತ್ತದೆ.

## ಸುರಕ್ಷಣೆ ಹಾಗೂ ವ್ಯವಹಾರದಲ್ಲಿ ನಿಷ್ಪಕ್ಷಪಾತ ವರ್ತನೆ

ಬಂಡವಾಳ ಪತ್ರ ವಿನಿಮಯ ಕೇಂದ್ರದ ಸದಸ್ಯರು ಪ್ರಾಮಾಣಿಕರಾಗಿದ್ದು ಸಮಾಜದಲ್ಲಿ ಮರ್ಯಾದೆಯನ್ನು ಪಡೆದಿರಬೇಕು. ತಮ್ಮ ವ್ಯಾಪಾರ ವ್ಯವಹಾರಗಳಲ್ಲಿ ನಿಷ್ಪಕ್ಷಪಾತವನ್ನೂ ನೈತಿಕ ಜವಾಬ್ದಾರಿಯನ್ನೂ ತೋರಬೇಕು.

ಷೇರುಗಳನ್ನು ಕೊಂಡು ಮಾರುವುದರಲ್ಲಿ ದೊರೆಯಬಹುದಾದ ಲಾಭಕ್ಕೆ ಹಾತೊರೆದು ಅನೇಕ ಮುಗ್ಧ ವಿನಿಯೋಜಕರು ಷೇರು ವ್ಯವಹಾರಗಳಲ್ಲಿ ತೊಡಗುತ್ತಾರೆ. ಅನನುಭವಿಗಳಾದ ಇಂಥವರಲ್ಲಿ ಅನೇಕರು ಏರುಪೇರಾಗುವ ಷೇರುಬೆಲೆಗಳಿಂದ ನಷ್ಟ ಹೊಂದುತ್ತಾರೆ. ಷೇರೊಂದರ ಬೆಲೆ ಅದರಲ್ಲಿ ವ್ಯವಹರಿಸುವ ಸಟ್ಟಾಕೋರರ ಕೈಚಳಕದಿಂದ ಸಾಕಷ್ಟು ಪ್ರಭಾವಿತವಾಗುತ್ತದೆಂಬುದನ್ನು ಈ ಮುಗ್ಧರು ಅರಿಯರು.

ಬಹುಸಂಖ್ಯೆಯ ಸಾರ್ವಜನಿಕರಲ್ಲದೆ ಅನಾಯಾಸವಾಗಿ ಲಾಭ ಗಳಿಸಲು ಪ್ರಯತ್ನಿಸುವ ಸಟ್ಟಾಕೋರರು ನೆರೆದಿರುವ ಷೇರುಪೇಟೆಯಲ್ಲಿ ಕೆಲಮಟ್ಟಿನ ಸಟ್ಟಾ ವ್ಯವಹಾರ ಅನಿವಾರ್ಯವಿರಬಹುದು. ಆದರೆ ಈ ಅಪಾಯವನ್ನು ಕನಿಷ್ಠ ಮಟ್ಟಕ್ಕೆ ಇಳಿಸುವುದು ವಿನಿಮಯ ಕೇಂದ್ರದ ಜವಾಬ್ದಾರಿ. ವಿನಿಮಯ ಕೇಂದ್ರ ಸ್ಪಷ್ಟವಾಗಿ ನಿರೂಪಿಸಲಾದ ನಿಯಮ ನಿಬಂಧನೆಗಳ ನೀತಿಸಂಹಿತೆಯನ್ನು ಹೊಂದಿರಬೇಕಲ್ಲದೆ ವ್ಯವಹಾರದಲ್ಲಿ ಅದನ್ನು ತತ್ವಶಃ ಪಾಲಿಸಲಾಗುತ್ತಿದೆಯೇ ಎಂಬುದನ್ನು ಗಮನಿಸುತ್ತಿರಬೇಕು. ನಿಯಮ ಭಂಗದ ವಿಷಯದಲ್ಲಿ ವ್ಯವಸ್ಥಾಪನ ಸಮಿತಿ ನಿಷ್ಠುರವಾದ ಧೋರಣೆ ತಳೆಯಬೇಕಾದ್ದು ಮುಖ್ಯ. ನಿಯಮ ಭಂಗಕ್ಕೆ ಕಾರಣರಾದ ಸದಸ್ಯರಿಗೆ ತೀವ್ರ ದಂಡನೆ ವಿಧಿಸಬೇಕು. ಜುಲ್ಮಾನೆ ವಿಧಿಸುವುದರಿಂದ ಹಿಡಿದು ಸದಸ್ಯತ್ವ ರದ್ದುಪಡಿಸುವವರೆಗೆ ತನಗಿರುವ ಅಧಿಕಾರವನ್ನು ವ್ಯವಸ್ಥಾಪನ ಸಮಿತಿ ಉಚಿತ ರೀತಿಯಲ್ಲಿ ಪ್ರಯೋಗಿಸಬೇಕು.

**ಉಳಿತಾಯದ ಹರಿವು**

ಒಂದು ಕಂಪನಿಯ ಷೇರಿನ ಮಾರುಕಟ್ಟೆ ದರವನ್ನು ನಿರ್ಧರಿಸುವಲ್ಲಿ ಆ ಕಂಪನಿಯ ಲಾಭಪ್ರದತೆ ಬಹು ಮುಖ್ಯವಾದ ಅಂಶ. ಲಾಭಪ್ರದವಾಗಿ ನಡೆಯುತ್ತಿರುವ ಕಂಪನಿಯ ಆಸ್ತಿಗಳು ವೃದ್ಧಿಸುತ್ತವೆ. ಷೇರುದಾರ ಕಂಪನಿಯ ಭಾಗಶಃ ಮಾಲೀಕತ್ವ ಹೊಂದಿರುವುದರಿಂದ ಕಂಪನಿಯ ಆಸ್ತಿಗಳು ವೃದ್ಧಿಸಿದಂತೆ ಅವನ ಬಳಿಯಿರುವ ಷೇರಿನ ಮೌಲ್ಯವೂ ಹೆಚ್ಚಿದಂತಾಗುತ್ತದೆ. ನಿರ್ದಿಷ್ಟ ಕೈಗಾರಿಕೆಯೊಂದರ ಪ್ರತಿಭೂತಿಗಳ ಬೆಲೆ ಒಂದೇ ಸಮನೆ ಏರುತ್ತಿದ್ದರೆ ಆ ಕೈಗಾರಿಕೆ ಲಾಭಪ್ರದವಾಗಿ ನಡೆಯುತ್ತಿದೆಯೆಂದು ಅರ್ಥೈಸಬಹುದಲ್ಲದೆ ಆ ಕೈಗಾರಿಕೆ ಇನ್ನೂ ಹೆಚ್ಚು ಬಂಡವಾಳವನ್ನು ಹೀರಿಕೊಂಡು ಆರೋಗ್ಯಕರವಾಗಿ ಬೆಳೆಯಲು ಸಾಧ್ಯ ಎಂದೂ ಪರಿಭಾವಿಸಬಹುದು. ತದ್ವಿರುದ್ಧವಾಗಿ ಒಂದು ಕೈಗಾರಿಕೆಯ ಪ್ರತಿಭೂತಿಗಳ ಬೆಲೆ ಇಳಿಯುತ್ತಲೇ ಹೋದರೆ ಆ ಕ್ಷೇತ್ರದಲ್ಲಿ ಬಂಡವಾಳ ತೊಡಗಿಸುವುದು ನಷ್ಟಕಾರಕ ಎಂದಾಗುತ್ತದೆ. ನಷ್ಟದಾಯಕ ಕೈಗಾರಿಕೆಯಲ್ಲಿ ಬಂಡವಾಳ ತೊಡಗಿಸುವುದನ್ನು ನಿರುತ್ತೇಜಿಸುವುದು, ಲಾಭದಾಯಕ ಕೈಗಾರಿಕೆಯಲ್ಲಿ ಹೆಚ್ಚು ಬಂಡವಾಳ ತೊಡಗಿಸುವುದಕ್ಕೆ ಉತ್ತೇಜನ ನೀಡುವುದು—ಇವು ವ್ಯವಸ್ಥಿತ ಷೇರು ಪೇಟೆಯಲ್ಲಿ ಸಹಜವಾಗಿ ನಡೆಯುವ ಕ್ರಿಯೆಗಳು.

# ಸುದ್ದಿ ಸಾರ

ಸಾ.ಅ.ಮಂ

### ಠೇವಣಿದಾರರಿಗೆ ರಿಯಾಯಿತಿ

ನಿಧನರಾದ ವ್ಯಕ್ತಿಗಳ ಹೆಸರಿನಲ್ಲಿ ಇರತಕ್ಕ ಚಾಲ್ತಿ ಠೇವಣಿ ಖಾತೆಗಳ ಹಣವನ್ನು ಅವರ ವಾರಸುದಾರರಿಗೆ ಪಾವತಿ ಮಾಡುವವರೆಗಿನ ಅವಧಿಗೆ ಉಳಿತಾಯ ಠೇವಣಿಗಳಿಗೆ ಅನ್ವಯಿಸುವ ದರದಲ್ಲಿ ಬಡ್ಡಿಯನ್ನು ಇನ್ನುಮುಂದೆ ನೀಡಬೇಕಾಗುತ್ತದೆ.

### ತೀರುವೆ ಮನೆಗಳಲ್ಲಿ ಗಣಕ ಯಂತ್ರಗಳಿಂದ ವ್ಯವಹಾರ

ಹೊಸ ದೆಹಲಿ ಮತ್ತು ಮದರಾಸಿನ ತೀರುವೆ ಮನೆಗಳಲ್ಲಿ ಗಣಕ ಯಂತ್ರಗಳ ಸಹಾಯದಿಂದ ವ್ಯವಹಾರ ನಡೆಸುವ ವ್ಯವಸ್ಥೆ ಇದೇ ಜುಲೈ 4ರಂದು ಆರಂಭವಾಯಿತು. ಮೊಟ್ಟಮೊದಲು ಗಣಕ ಯಂತ್ರವನ್ನು ಮುಂಬೈಯ ತೀರುವೆ ಮನೆಯಲ್ಲಿ 982ರ ನವೆಂಬರ್ 3ರಿಂದ ಬಳಕೆಗೆ ತರಲಾಯಿತು. (ಬ್ಯಾಂಕಿಂಗ್ ಪ್ರಪಂಚ–6 ನೋಡಿ)

### ಪಟ್ಟಣ ಸಹಕಾರಿ ಬ್ಯಾಂಕುಗಳು ಮತ್ತು ಬಹುಮಾನ–ಚೀಟಿ ಯೋಜನೆ

ವ್ಯಕ್ತಿಗಳು, ಸಂಸ್ಥೆಗಳು ಅಥವಾ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳು ನಡೆಸುವ ಬಹುಮಾನ–ಚೀಟಿ ಯೋಜನೆಗಳಲ್ಲಿ ಯಾವುದೇ ಪ್ರಾಥಮಿಕ ಸಹಕಾರಿ ಬ್ಯಾಂಕು ಯಾವುದೇ ರೀತಿಯಲ್ಲಿ ಭಾಗವಹಿಸುವಂತಿಲ್ಲ. ಈ ವಿಷಯವನ್ನು ಎಲ್ಲ ಪ್ರಾಥಮಿಕ ಸಹಕಾರಿ ಬ್ಯಾಂಕುಗಳಿಗೂ ತಿಳಿಸುವಂತೆ ರಿಸರ್ವ್ ಬ್ಯಾಂಕು ಸಹಕಾರ ಸಂಘಗಳ ನೋಂದಣಿ ಅಧಿಕಾರಿಗಳನ್ನು ಕೋರಿದೆ.

### ಬದಲಿ ತೈಲಯಂತ್ರಗಳ ಖರೀದಿಗಾಗಿ ಪುನರ್ವಿತ್ತ ಸೌಲಭ್ಯ

ವಿದ್ಯುತ್ ಪಂಪ್‌ಸೆಟ್‌ಗಳ ಸ್ಥಾಪನೆಗಾಗಿ ಈವರೆಗೆ ಯಾವುದೇ ಸಾಲವನ್ನು ಪಡೆದಿಲ್ಲದ ರೈತರು ಬದಲಿ ವ್ಯವಸ್ಥೆಯಾಗಿ 5 ಅಶ್ವಶಕ್ತಿಗೆ ಮೀರಿಲ್ಲದ ಡೀಸೆಲ್ ಪಂಪ್‌ಸೆಟ್‌ಗಳನ್ನು ಕೊಳ್ಳಬಯಸಿದಾಗ ಬ್ಯಾಂಕುಗಳು ಅಂತಹವರಿಗೆ ಸಾಲಗಳನ್ನು ವಿತರಣೆ ಮಾಡಿದರೆ ತಾನು ಆ ಬಗ್ಗೆ ಪುನರ್ವಿತ್ತ ಸೌಲಭ್ಯ ನೀಡಲು ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಬಾರ್ಡ್) ನಿರ್ಧರಿಸಿದೆ.

### ಬ್ಯಾಂಕಿಂಗೇತರ ಕಂಪೆನಿಗಳ ಠೇವಣಿಗಳಲ್ಲಿ ಗಮನಾರ್ಹ ಏರಿಕೆ

ರಿಸರ್ವ್ ಬ್ಯಾಂಕಿನ ಹಣಕಾಸು ಕಂಪನಿಗಳ ಇಲಾಖೆ ನಡೆಸಿದ ಅಧ್ಯಯನವೊಂದರ ಪ್ರಕಾರ 982ರ ಮಾರ್ಚಿಗೆ ಕೊನೆಗೊಂಡ ವರ್ಷದಲ್ಲಿ ವರದಿ ಸಲ್ಲಿಸುವ 5420 ಕಂಪೆನಿಗಳು 549 ಕೋಟಿ ರೂ.ಗಳ ಠೇವಣಿಯನ್ನು ಹೊಂದಿದ್ದುವು. ಇದಕ್ಕೆ ಹಿಂದಿನ ವರ್ಷದಲ್ಲಿ 320 ವರದಿ ಸಲ್ಲಿಸುವ ಕಂಪೆನಿಗಳು ಒಟ್ಟು 488 ಕೋಟಿ ರೂ.ಗಳ ಠೇವಣಿಯನ್ನು ಹೊಂದಿದ್ದುವು.

### ಬ್ಯಾಂಕಿಂಗ್ ವ್ಯವಸ್ಥೆಯ ಯಾಂತ್ರೀಕರಣದ ಬಗ್ಗೆ ಸಮಿತಿ

ಬ್ಯಾಂಕಿಂಗ್ ವ್ಯವಸ್ಥೆಯ ಭವಿಷ್ಯದ ವಿಸ್ತರಣೆಯನ್ನು ಗಮನದಲ್ಲಿರಿಸಿಕೊಂಡು, ಅದರ ಯಾಂತ್ರೀಕರಣವನ್ನು ಹಂತ ಹಂತವಾಗಿ ಸಾಧಿಸುವ ಕಾರ್ಯಕ್ರಮವೊಂದರ ರೂಪುರೇಷೆಗಳನ್ನು ರಿಸರ್ವ್ ಬ್ಯಾಂಕ್ ನೇಮಿಸಿದ ಅದರ ಉಪಗವರ್ನರ್ ಡಾ। ಸಿ. ರಂಗರಾಜನ್‌ರವರ ಅಧ್ಯಕ್ಷತೆಯಲ್ಲಿನ ಸಮಿತಿಯೊಂದು ಪರಿಶೀಲಿಸುತ್ತಿದೆ. ಸಮಿತಿ ತನ್ನ ವರದಿಯನ್ನು 1984ರ ಏಪ್ರಿಲ್ ತಿಂಗಳ ಅಂತ್ಯದೊಳಗಾಗಿ ನೀಡುವ ನಿರೀಕ್ಷೆಯಿದೆ.

### ಭಾರತೀಯ ಸ್ಟೇಟ್ ಬ್ಯಾಂಕಿನ ಸ್ಥಳೀಯ ಪ್ರಧಾನ ಕಛೇರಿ ಹಾಗೂ ಪ್ರಾದೇಶಿಕ ನೇಮಕಾತಿ ಮಂಡಳಿಯ ಸ್ಥಾಪನೆ

ಆಗಸ್ಟ್ ೧೪ರಂದು ಬೆಂಗಳೂರಿನಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಸ್ಥಳೀಯ ಪ್ರಧಾನ ಕಛೇರಿಯನ್ನು ಕೇಂದ್ರ ಅರ್ಥ ಖಾತಾ ಸಚಿವರಾದ ಶ್ರೀ ಜನಾರ್ಧನ ಪೂಜಾರಿಯವರು ಉದ್ಘಾಟಿಸಿದರು.ಸಮಾರಂಭದಲ್ಲಿ ಕರ್ನಾಟಕ ರಾಜ್ಯದ ಸಚಿವ

ರಾದ ಸರ್ವಶ್ರೀ ಎಂ. ರಘುಪತಿ ಮತ್ತು ಎ. ಲಕ್ಷ್ಮೀಸಾಗರ್ ಸಹ ಉಪಸ್ಥಿತರಿದ್ದರು. ಅಖಿಲ ಕರ್ನಾಟಕ ಬ್ಯಾಂಕ್ ಕನ್ನಡ ಸಂಘಗಳ ಪರಿಷತ್ತಿನ ಒತ್ತಾಯಕ್ಕೆ ಓಗೊಟ್ಟು ಈ ಸ್ಥಳೀಯ ಕಛೇರಿಯ ಅಂಗವಾಗಿ ಪ್ರಾದೇಶಿಕ ನೇಮಕಾತಿ ಮಂಡಳಿಯನ್ನು ಸಹ ತ್ವರಿತವಾಗಿ ಸ್ಥಾಪಿಸಲಾಯಿತು. ಆಗಸ್ಟ್ 8 ರಂದು ಕರ್ನಾಟಕದಲ್ಲಿ ನಡೆದ ಸದರಿ ಬ್ಯಾಂಕಿನ ನೇಮಕಾತಿ ಪರೀಕ್ಷೆಗಳನ್ನು ಈ ಮಂಡಳಿಯೇ ನಡೆಸಿತು.

### ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆ ದರಗಳಲ್ಲಿ ಇಳಿತ

ವಾಣಿಜ್ಯ ಬ್ಯಾಂಕುಗಳು ತಾವು ನೀಡುವ ಸಾಲಗಳು ಹಾಗೂ ಮುಂಗಡಗಳ ಮೇಲಿನ ಬಡ್ಡಿ ದರಗಳನ್ನು ಏಪ್ರಿಲ್ 1ರಿಂದ ಇಳಿಸಿದುವು. ಗರಿಷ್ಠತಮ ದರವು ಶೇ. 19.50 ರಿಂದ ಶೇ. 18.00ಕ್ಕೆ ಇಳಿಯಿತು.

### ವಿದೇಶ ಪ್ರವಾಸಕ್ಕಾಗಿ ವಿದೇಶಿ ವಿನಿಮಯ ಬಿಡುಗಡೆ

ರಿಸರ್ವ್ ಬ್ಯಾಂಕಿನ ವಿನಿಮಯ ನಿಯಂತ್ರಣ ಇಲಾಖೆಯ ವಿವಿಧ ಕಚೇರಿಗಳು ಮಾರ್ಚಿ 1983ಕ್ಕೆ ಕೊನೆಗೊಂಡ ವರ್ಷದಲ್ಲಿ 49,104 ಪ್ರಕರಣಗಳಿಗೆ ಸಂಬಂಧಿಸಿದಂತೆ ಒಟ್ಟು 142.32 ಕೋಟಿ ರೂ.ಗಳಷ್ಟು ಮೌಲ್ಯದ ವಿದೇಶಿ ವಿನಿಮಯವನ್ನು ವಿವಿಧ ಉದ್ದೇಶಗಳಿಗಾಗಿ ವಿದೇಶ ಪ್ರವಾಸಕ್ಕಾಗಿ ಬಿಡುಗಡೆ ಮಾಡಿದುವು. ಇದಕ್ಕೆ ಹಿಂದಿನ ವರ್ಷದಲ್ಲಿ ಈ ಕಛೇರಿಗಳು 46,133 ಪ್ರಕರಣಗಳಲ್ಲಿ 114.53 ಕೋಟಿ ರೂ.ಗಳಷ್ಟು ವಿನಿಮಯವನ್ನು ಬಿಡುಗಡೆ ಮಾಡಿದ್ದುವು. ಏರಿಕೆಯಾದ 27.79 ಕೋಟಿ ರೂ.ಗಳಲ್ಲಿ ವ್ಯಾಪಾರೋದ್ದೇಶಗಳಿಗಾಗಿ ಮಾತ್ರವೇ ಬಿಡುಗಡೆ ಮಾಡಲಾದ ಮೊಬಲಗು 20.99 ಕೋಟಿ ರೂ.ಗಳಷ್ಟು.

### ಸಣ್ಣ ಸಾಲಗಳಿಗೆ ಖಾತರಿ ಬೆಂಬಲದಲ್ಲಿ ಗಮನಾರ್ಹ ಏರಿಕೆ

ಸಣ್ಣ ಪ್ರಮಾಣದ ಸಾಲಗಾರರಿಗೆ, ವಿಶೇಷವಾಗಿ ಸಮಾಜದ ದುರ್ಬಲ ವರ್ಗಗಳಿಗೆ ಸಾಲಸೌಲಭ್ಯಗಳನ್ನು ನೀಡುವಂತಹ ಸಂಸ್ಥೆಗಳಿಗೆ ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ ನೀಡುವ ಖಾತರಿ ಬೆಂಬಲದಲ್ಲಿ 982ನೆಯ ವರ್ಷದಲ್ಲಿ ಗಮನಾರ್ಹ ಏರಿಕೆಯಾಗಿದೆ. ಕೈಗಾರಿಕೇತರ ಕ್ಷೇತ್ರಗಳಲ್ಲಿ ನಿಗಮ ಖಾತರಿ ನೀಡಿದ ಮುಂಗಡಗಳ ಒಟ್ಟು ಮೊತ್ತ 1982ರ ಜೂನ್‌ನಲ್ಲಿ 4840 ಕೋಟಿ ರೂ.ಗಳಷ್ಟಿತ್ತು. ಅದು ಹಿಂದಿನ ವರ್ಷ 1981ರ ಜೂನ್‌ನಲ್ಲಿ 3,558 ಕೋಟಿ ರೂ.ಗಳಷ್ಟಾಗಿತ್ತು. ಏರಿಕೆಯ ಪ್ರಮಾಣ ಶೇ. 36ರಷ್ಟು. ಈ ಖಾತರಿಗಳಲ್ಲಿ ಸಿಂಹಪಾಲು (ಶೇ. 99.6ರಷ್ಟು)ಸಣ್ಣಸಾಲಗಳ ಖಾತರಿ ಯೋಜನೆಯದಾಗಿತ್ತು. ಈ ಯೋಜನೆಯಲ್ಲಿ ವಾಣಿಜ್ಯ ಬ್ಯಾಂಕುಗಳು ಹಾಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಪಾಲ್ಗೊಂಡಿವೆ. 982ರ ಜೂನ್ ಅಂತ್ಯಕ್ಕೆ ಖಾತರಿ ಪಡೆದ ಮುಂಗಡಗಳಿಗೆ ಸಂಬಂಧಿಸಿದಂತೆ ಸಾಲಗಾರರ ಗುಂಪುವಾರು ವಿವರಗಳು ಇಂತಿವೆ: ಆವರಣದಲ್ಲಿರುವ ಅಂಕಿಗಳು 98 ರ ಜೂನ್ ಅಂತ್ಯಕ್ಕೆ ಸಂಬಂಧಿಸಿದುವು: ರೈತರು/ಕೃಷಿಕರು 3,042 ಕೋಟಿ ರೂ. (2,268 ಕೋಟಿ ರೂ.); ಸಾರಿಗೆ ಸಂಚಾಲಕರು 731 ಕೋಟಿ ರೂ. (478 ಕೋಟಿ ರೂ.); ಚಿಲ್ಲರೆ ವ್ಯಾಪಾರಿಗಳು 512 ಕೋಟಿ ರೂ. (399 ಕೋಟಿ ರೂ.); ವೃತ್ತಿನಿರತರು/ಸ್ವಉದ್ಯೋಗಿಗಳು 199 ಕೋಟಿ ರೂ. (166 ಕೋಟಿ ರೂ.); ವಾಣಿಜ್ಯ ಉದ್ಯಮಗಳು 210 ಕೋಟಿ ರೂ. (150 ಕೋಟಿ ರೂ.); ಭಿನ್ನಕ ಬಡ್ಡಿದರ ಯೋಜನೆ ಅಡಿಯ ಸಾಲಗಾರರು 126 ಕೋಟಿ ರೂ. (87 ಕೋಟಿ ರೂ.)

### ಹಣಪರಿವರ್ತಕರಿಂದ ಪ್ರವಾಸಿಗಳಿಗೆ ವಿದೇಶಿ ಕರೆನ್ಸಿಯ ಮಾರಾಟ

ವಿದೇಶ ಪ್ರವಾಸ ಯೋಜನೆ (ಎಫ್‌ಟಿಎಸ್) ಮತ್ತು ನೆರೆ ದೇಶಗಳ ಪ್ರವಾಸ ಯೋಜನೆ(ಎನ್.ಟಿ.ಎಸ್)ಅನ್ವಯ, ವಿದೇಶಗಳಿಗೆ ಪ್ರಯಾಣ ಮಾಡುವವರಿಗೆ ವಿದೇಶಿ ಕರೆನ್ಸಿ ನೋಟು ಹಾಗೂ ನಾಣ್ಯಗಳನ್ನು ಮಾರಲು ಅಧಿಕೃತ ಪೂರ್ಣಪ್ರಮಾಣದ ಹಣಪರಿವರ್ತಕರಿಗೆ ಅನುಮತಿಯನ್ನು ಈ ವರ್ಷದ ಫೆಬ್ರುವರಿ 7ರ ವರೆಗೆ ಮಾತ್ರ ನೀಡಲಾಗಿತ್ತು. ಈಗ ಈ ಅನುಮತಿಯನ್ನು ಮುಂದೆ ಸೂಚನೆ ನೀಡುವವರೆಗೆ ವಿಸ್ತರಿಸಲಾಗಿದೆ.

# ಪುಸ್ತಕಾವಲೋಕನ

**ಭಾರತದಲ್ಲಿ ಸೆಂಟ್ರಲ್ ಬ್ಯಾಂಕಿನ ವಿಕಾಸ: ಮೂಲ: ಬಿ. ರಾಮರಾವ್ ; ಅನು: ಡಾ|| ಎನ್. ಆರ್. ರಾವ್ ;** ಕನ್ನಡ ಅಧ್ಯಯನ ಪೀಠ, ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ; ಪು. 79 ; ಬೆಲೆ : ರೂ. 5. (1977)

"1949ರಿಂದ ಏಳೂವರೆ ವರ್ಷಗಳ ಕಾಲ ರಿಸರ್ವ್ ಬ್ಯಾಂಕಿನ ಅಧ್ಯಕ್ಷರಾಗಿದ್ದ ಬಿ. ರಾಮರಾವ್ ಅವರು 1960ರ ಏಪ್ರಿಲ್ 18, 20 ಮತ್ತು 22ರಂದು ಮದರಾಸು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಸರ್. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ದತ್ತಿ ಉಪನ್ಯಾಸಗಳನ್ನು ನೀಡಿದರು. ಈ ಉಪನ್ಯಾಸ ಮಾಲೆಯನ್ನು ಪುಸ್ತಕರೂಪದಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ" ವಿಶ್ವವಿದ್ಯಾಲಯ ಮಟ್ಟದ ಪಠ್ಯಗ್ರಂಥಗಳನ್ನು ಪ್ರಕಟಿಸುವ ಭಾರತ ಸರ್ಕಾರದ ಸಮಾಜ ಕಲ್ಯಾಣ ಮತ್ತು ಶಿಕ್ಷಣ ವಿಭಾಗದ ಯೋಜನೆಯ ಅನ್ವಯ ಪ್ರಕಟಿಸಲಾಗಿದೆ. "ಕನ್ನಡವನ್ನು ವಿವಿಧ ಹಂತಗಳಲ್ಲಿ ಕಾಲೇಜು ಹಾಗೂ ಸ್ನಾತಕೋತ್ತರ ವರ್ಗಗಳಲ್ಲಿ ಆವಶ್ಯಕವಾದ ಪಠ್ಯ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣ ಮಾಧ್ಯಮವನ್ನಾಗಿ ಪರಿವರ್ತಿಸುವ ಉದ್ದೇಶದಿಂದ (ಹಾರೈಕೆ—ಕುಲಪತಿ ಆರ್. ಸಿ. ಹಿರೇಮಠ) ರೂಪುಗೊಂಡ ಈ ಪಠ್ಯಗ್ರಂಥ" ಪ್ರೌಢ ವ್ಯಾಸಂಗ ಹಾಗೂ ಸಂಶೋಧನೆಯ ಪರಿಣಾಮಗಳನ್ನು ಕನ್ನಡ ಮಕ್ಕಳಿಗೆ ತಾಯ್ನುಡಿಯಲ್ಲಿ ನೀಡಲು, ಆಧುನಿಕ ಜ್ಞಾನವನ್ನು ಜನಸಾಮಾನ್ಯರತ್ತ ಹರಿಸಲು ನೆರವಾಗುವ ತನ್ನ ಗುರಿಯಲ್ಲಿ ಯಶಸ್ವಿಯಾಗಿದೆ.

ಮೂರು ಅಧ್ಯಾಯಗಳಲ್ಲಿ ಭಾರತದ ಕೇಂದ್ರ ಬ್ಯಾಂಕು ರೂಪಗೊಂಡ ರೀತಿಯನ್ನು ಯೂರೋಪ್, ಇಂಗ್ಲೆಂಡ್‌ಗಳ ಕೇಂದ್ರ ಬ್ಯಾಂಕುಗಳಿಗಿಂತ ಭಿನ್ನವಾದ ರೀತಿಯಲ್ಲಿ ವಿಕಾಸಗೊಂಡಿದ್ದನ್ನು, ಭಾರತದ ಪ್ರಗತಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ರೀತಿಯನ್ನು ಸ್ವಾನುಭವ ಮತ್ತು ಆಳವಾದ ಪಾಂಡಿತ್ಯದಿಂದ ಅಧಿಕಾರಯುಕ್ತವಾದ ಮಾತುಗಳಲ್ಲಿ ರಾಮರಾವ್ ಅವರು ವಿವರಿಸಿದ್ದಾರೆ.

1934ರಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ವಿಧೇಯಕ ಅಂಗೀಕೃತವಾಯಿತು. ಆದರೆ ಇಂಥ ಕೇಂದ್ರ ಬ್ಯಾಂಕಿನ ಉಗಮಕ್ಕಾಗಿ ಪ್ರಯತ್ನಗಳು 1926ರಲ್ಲಿಯೇ ಆರಂಭಗೊಂಡುವು. ಆರ್ಥಿಕ ಸಮತೋಲವನ್ನು, ಸದೃಢ ತನ್ನತನವನ್ನು ಸುಸ್ಥಿತಿಯಲ್ಲಿ ಕಾಯ್ದುಕೊಳ್ಳುವ, ಅದರಂತೆ ದೇಶದ ಹಣಕಾಸು ವ್ಯವಸ್ಥೆಯನ್ನು ನಿಯಂತ್ರಿಸುವ ಉದ್ದೇಶದಿಂದ ಆರಂಭಗೊಂಡ ಬ್ಯಾಂಕಿನ ಸಂವಿಧಾನ ಪಶ್ಚಿಮ ಯೂರೋಪಿನ ಮಧ್ಯವರ್ತಿ ಬ್ಯಾಂಕಿನ ಸ್ವರೂಪಗಳಿಗೆ ಅನುಗುಣವಾಗಿತ್ತು. ಪ್ರಾಚೀನ ಆವಶ್ಯಕತೆಗಳನ್ನು ಪೂರೈಸಲು ಮಾತ್ರ ಶಕ್ತವಾಗಿದ್ದ ಭಾರತೀಯ ಬ್ಯಾಂಕಿಂಗ್ ವ್ಯವಸ್ಥೆ ಆಧುನಿಕ ಅಗತ್ಯಗಳನ್ನು ಪೂರೈಸಲು ಸಿದ್ಧವಾಗಬೇಕಿತ್ತು. ದ್ವಿತೀಯ ವಿಶ್ವ ಸಮರದ ಮುನ್ನಿನ ಮತ್ತು ಅನಂತರದ ಕಾಲ ಆಧುನಿಕ ಭಾರತೀಯ ಬ್ಯಾಂಕಿನ ರೂಪರೇಷೆಗಳ ಪ್ರಯೋಗಾತ್ಮಕ ಕಾಲವಾಗಿತ್ತು ಎಂದು ನಾವು ಭಾವಿಸಬಹುದು. ಈ ಪ್ರಯೋಗದ ವಿವಿಧ ಹಂತಗಳನ್ನು ಉಪನ್ಯಾಸಕಾರರು ನಿರೂಪಿಸುತ್ತಾರೆ. 1949ರ ಬ್ಯಾಂಕಿಂಗ್ ಕಂಪನಿಗಳ ನಿಯಂತ್ರಣ ಆಜ್ಞೆ ಒಂದು ನಿರ್ಣಾಯಕ ಘಟ್ಟ ಎನ್ನಬಹುದು. ಈ ಕಾಯ್ದೆಯು ಬ್ಯಾಂಕುಗಳನ್ನು ನಿಯಂತ್ರಿಸಲು ರಿಸರ್ವ್‌ಬ್ಯಾಂಕಿಗೆ ವಿಸ್ತೃತ ಅಧಿಕಾರವನ್ನು ತಂದುಕೊಟ್ಟಿತು. ಬ್ಯಾಂಕುಗಳನ್ನು 'ತಪಾಸಿಸುವ ಅಧಿಕಾರ, ಹೊಸ ಶಾಖೆಗಳನ್ನು ತೆರೆಯಲು ಪರವಾನಗಿ ನೀಡುವುದು, ರಿಸರ್ವ್ ಬ್ಯಾಂಕ್ ನೀಡುವ ಆದೇಶಗಳನ್ನು ಪಾಲಿಸುವುದು. — ಇವು ಈ ಅಧಿನಿಯಮದ ಮುಖ್ಯ ಅಂಶಗಳು. ಬ್ಯಾಂಕುಗಳಿಗೆ ಭದ್ರತೆ ಮತ್ತು ಗ್ರಾಹಕರ ನಂಬಿಕೆಗೆ ಪಾತ್ರವಾದ ಗೌರವಾನ್ವಿತ ಸ್ಥಾನವನ್ನು ದೊರಕಿಸಲು ರಿಸರ್ವ್ ಬ್ಯಾಂಕು ಜಾರಿಗೆ ತಂದ ಸಂಶೋಧನಾ ಪದ್ಧತಿ ಹಾಗೂ ನುರಿತ ನೌಕರರ ತಂಡ ರಚನೆಗಾಗಿ ನಿರ್ಮಾಣವಾದ ಬ್ಯಾಂಕರುಗಳ ಕಾಲೇಜಿನ ಬಗ್ಗೆ ಶ್ರೀ ರಾಮರಾವ್ ಅವರು ಪ್ರಸ್ತಾಪಿಸುತ್ತಾರೆ. ಅಭಿವೃದ್ಧಿಹೊಂದದ ದೇಶದಲ್ಲಿ ಸಾಲಸೌಲಭ್ಯ ಸಾಮಾನ್ಯವಾಗಿ ವ್ಯಾಪಾರಕೇಂದ್ರ, ಪಟ್ಟಣ, ಅರೆಪಟ್ಟಣಗಳಲ್ಲಿ ಮಾತ್ರ ದೊರೆಯುತ್ತದೆ. ಸಾಮಾಜಿಕ ಬ್ಯಾಂಕಿಂಗನ್ನು ತನ್ನ ಉದ್ದೇಶಗಳಲ್ಲಿ ಒಂದಾಗಿಸಿದ ರಿಸರ್ವ್ ಬ್ಯಾಂಕು, ಬ್ಯಾಂಕಿಂಗ್ ಸೌಲಭ್ಯಗಳ ವಿಸ್ತರ

ಣೆಗೂ ಕ್ರಮ ಕೈಗೊಂಡಿತು. 1951ರಲ್ಲಿ ನೇಮಕವಾದ ಸರ್ ಪುರುಷೋತ್ತಮ ದಾಸ್ ಠಾಕೂರರ 'ಗ್ರಾಮೀಣ ಮತ್ತು ಪರಿಶೀಲನಾ ಸಮಿತಿ' ಇಂಪೀರಿಯಲ್ ಬ್ಯಾಂಕಿನ ರಾಷ್ಟ್ರೀಕರಣಕ್ಕೆ ಕರೆ ನೀಡಿತು. ರಿಸರ್ವ್ ಬ್ಯಾಂಕು ಅಸ್ತಿತ್ವಕ್ಕೆ ಬರುವ ಮುನ್ನ ಒಂದು ರೀತಿಯಲ್ಲಿ ಕೇಂದ್ರ ಬ್ಯಾಂಕಿನ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದ ಇಂಪೀರಿಯಲ್ ಬ್ಯಾಂಕನ್ನು 1955ರಲ್ಲಿ ರಾಷ್ಟ್ರೀಕರಿಸಲಾಯಿತು. ಇದರಿಂದ ಕಾಲವಿಸ್ತರಣೆಗೆ ಅವಕಾಶ ಹೆಚ್ಚಾಯಿತು.

"ಉಬ್ಬರ ಮತ್ತು ಧನಧೋರಣೆ, ಯುದ್ಧಕಾಲದಲ್ಲಿ ಮತ್ತು ನಂತರದಲ್ಲಿ ಉಬ್ಬರ" ಎಂಬ ಎರಡನೆಯ ಉಪನ್ಯಾಸದಲ್ಲಿ ರಾಮರಾವ್ ಅವರು ಜಾಗತಿಕ ಯುದ್ಧ ಭಾರತೀಯ ಆರ್ಥಿಕವ್ಯವಸ್ಥೆಯ ಮೇಲೆ ಬೀರಿದ ಪರಿಣಾಮವನ್ನು ವ್ಯಾಪಕವಾಗಿ ಚರ್ಚಿಸುತ್ತಾರೆ. ಸಾಮ್ರಾಜ್ಯಶಾಹಿಗಳಿಂದ ಯುದ್ಧೋದ್ದೇಶದ ಆರ್ಥಿಕ ತಂತ್ರದಿಂದಾಗಿ ಬೆಲೆಗಳು ಬಹಳ ಏರಿದವು. ಭಾರತೀಯ ರೂಪಾಯಿ ಇಂಗ್ಲೆಂಡಿನ ಸ್ಟರ್ಲಿಂಗಿಗೆ ಹೊಂದಿಕೊಂಡಿದ್ದು, ಔದ್ಯಮಿಕ ಉತ್ಪಾದನೆಯಲ್ಲಿ ಯುದ್ಧಸಾಮಗ್ರಿಗಳಿಗೆ ಪ್ರಾಶಸ್ತ್ಯದೊರೆತಿದ್ದು, ಗ್ರಾಹಕ ವಸ್ತುಗಳ ಉತ್ಪನ್ನ ಕ್ಷೀಣಿಸಿದ್ದು, ಸಾಗಣೆಯಲ್ಲಿ ತೊಡಕು, ಸರಕಾರದ ಆದಾಯ ವೆಚ್ಚದ ನಡುವಿನ ಖೋತಾ ಪರಿಸ್ಥಿತಿ ಮುಂತಾದವು ಉಬ್ಬರ ಸ್ಥಿತಿಗೆ ಕಾರಣವಾದವು. ಈ ಹಿನ್ನೆಲೆಯಲ್ಲಿ ಸ್ಟರ್ಲಿಂಗಿನ ಮೌಲ್ಯ ಕೂಡ ಕುಸಿಯುತ್ತಿದ್ದುದರಿಂದ ಅನಿವಾರ್ಯವಾಗಿ ಅದರೊಂದಿಗೆ ಭಾರತೀಯ ರೂಪಾಯಿ ಕೂಡ 1949ರಲ್ಲಿ ಅಪಮೌಲ್ಯಗೊಂಡಿತು. ರಿಸರ್ವ್ ಬ್ಯಾಂಕು ತನ್ನ ಅಧಿಕಾರವನ್ನು ಬಳಸಿ ಮುಂಗಡ ನಿಯಂತ್ರಣ, ವಿದೇಶೀವಿನಿಮಯದ ಮೇಲೆ ಹಿಡಿತ, ಬಡ್ಡಿ ದರದ ವ್ಯತ್ಯಾಸ (1951ರಲ್ಲಿ ಪ್ರಥಮ ಬಾರಿಗೆ ಶೇ. 3ರಿಂದ $3\frac{1}{2}$ಗೆ ಏರಿಕೆ). ಬ್ಯಾಂಕ್ ಉದರಿಯ ಬಗ್ಗೆ ಬಿಗಿ ಧೋರಣೆ ಮುಂತಾದ ಕಾರ್ಯಕ್ರಮಗಳನ್ನು ರೂಪಿಸಿತು. ಆರ್ಥಿಕ ವಲಯ ಉತ್ಪಾದನಾವಲಯಗಳಲ್ಲಿ ಬ್ಯಾಂಕ್ ಬಡ್ಡಿಯ ದರದ ವ್ಯತ್ಯಾಸದಿಂದಾಗುವ ಪರಿಣಾಮಗಳ ಬಗ್ಗೆ ರಾಮರಾವ್ ವಿವರಿಸುತ್ತಾರೆ. ದಿನದಿನ ಹೆಚ್ಚುತ್ತಿದ್ದ ಜನಸಂಖ್ಯೆ ಯೋಜನಾ ವೆಚ್ಚ, ರಕ್ಷಣಾ ವೆಚ್ಚ ಇವು ಹೊಸ ರಾಷ್ಟ್ರದಲ್ಲಿ ಅತಿಪ್ರಸರಣಕ್ಕೆ ಕಾರಣವಾದವು.

ತಮ್ಮ ಮೂರನೆಯ ಉಪನ್ಯಾಸದಲ್ಲಿ ಲೇಖಕರು ವ್ಯವಸಾಯ ಉದರಿ ಮತ್ತು ಗ್ರಾಮೀಣ ಸಹಕಾರಿ ಸಂಘಗಳ ಹುಟ್ಟು ಮತ್ತು ಬೆಳವಣಿಗೆಯಲ್ಲಿ ರಿಸರ್ವ್ ಬ್ಯಾಂಕ್ ವಹಿಸಿದ ಪಾತ್ರದ ಬಗ್ಗೆ ತಿಳಿಸುತ್ತಾರೆ. ಭಾರತದಲ್ಲಿ ಸಹಕಾರಿ ಚಳವಳಿ 1901ರಲ್ಲಿಯೇ ಆರಂಭವಾಯಿತು. ಅನೇಕ ಶ್ರದ್ಧಾವಂತ ಕಾರ್ಯಕರ್ತರು ಈ ಆಂದೋಲನದಲ್ಲಿ ಭಾಗವಹಿಸಿದ್ದರೂ 50 ವರುಷಗಳ ಅನಂತರವೂ ಈ ಸಂಘಗಳಿಂದ ಕೇವಲ 3%ರಷ್ಟು ಮಾತ್ರ ಕೃಷಿ ಉದರಿ ಸೌಕರ್ಯ ವಿಸ್ತರಣೆಗೊಂಡಿತು. ಭಾರತೀಯ ಸಾಮಾಜಿಕ ವ್ಯವಸ್ಥೆ, ನಗರದಲ್ಲಿ ಆಡಳಿತ ಉದ್ಯಮದ ಕೇಂದ್ರೀಕರಣ, ವಸಾಹತು ಆಡಳಿತ ಮುಂತಾದ ಕಾರಣಗಳನ್ನು ಸಹಕಾರಿ ಆಂದೋಲನದ ವಿಫಲತೆಗೆ ಉಪನ್ಯಾಸಕರು ನೀಡುತ್ತಾರೆ. ಸಹಕಾರಿ ಆಂದೋಲನವನ್ನು ಪುನರ್‌ಸಂಘಟಿಸಿ ಚೈತನ್ಯಯುಕ್ತವನ್ನಾಗಿ ಮಾಡುವ ದೃಷ್ಟಿಯಿಂದ ರಿಸರ್ವ್ ಬ್ಯಾಂಕು 'ಗ್ರಾಮೀಣ ಬ್ಯಾಂಕಿಂಗ್ ವಿಚಾರಣಾಸಮಿತಿ'ಯ ಶಿಫಾರಸ್ಸಿಗೆ ಅನುಗುಣವಾಗಿ 1951ರಲ್ಲಿ ವ್ಯಾಪಕ ಸಮೀಕ್ಷೆಯನ್ನು ನಡೆಸಲು ತಜ್ಞರ ಸಮಿತಿಯನ್ನು ನೇಮಕ ಮಾಡಿತು. ಆರ್ಥಿಕ ನೆರವು, ತಜ್ಞ ಸಿಬ್ಬಂದಿಯ ಸಲಹೆ, ಉಸ್ತುವಾರಿ ಮತ್ತು ಸರಕಾರಿ ಆಡಳಿತದ ಕ್ರಮಗಳನ್ನು ಕೈಗೊಳ್ಳಲಾಯಿತು. ಗ್ರಾಮೀಣ ಆರ್ಥಿಕ ವ್ಯವಹಾರದ ಹೆಚ್ಚು ಭಾಗವನ್ನು ಸಹಕಾರಿ ತತ್ವದ ಮೇಲೆ ಸಂಘಟಿಸುವ ಉದ್ದೇಶ ಈ ಪ್ರಯತ್ನಗಳಿಗಿತ್ತು. ಆದರೆ ರಿಸರ್ವ್ ಬ್ಯಾಂಕು ನಮ್ಮ ಸಾಮಾಜಿಕ ರಚನೆಯನ್ನು ಗಮನಿಸಿ ಸಹಕಾರಿ ಬೇಸಾಯಕ್ಕೆ ಹೆಚ್ಚು ಒತ್ತು ಕೊಡಲಿಲ್ಲ.

ಔದ್ಯಮಿಕ ಉದ್ದೇಶಗಳಿಗಾಗಿ ದೀರ್ಘಾವಧಿ ಸಾಲಗಳನ್ನು ನೀಡಲು ಭಾರತೀಯ ಬ್ಯಾಂಕುಗಳು ಅಷ್ಟು ಉತ್ಸುಕವಾಗಿರಲಿಲ್ಲವಾದ ಕಾರಣ 'ಭಾರತೀಯ ಕೈಗಾರಿಕಾ ಹಣಕಾಸು ನಿಗಮ'ದ ರಚನೆ 1948ರಲ್ಲಿ ಆಯಿತು. ರಿಸರ್ವ್ ಬ್ಯಾಂಕು ನಿಗಮದ ಬಂಡವಾಳದ ಐದನೆಯ ಒಂದಂಶವನ್ನು ನೀಡಿದ್ದೇ ಅಲ್ಲದೆ ರಚನಾತ್ಮಕ ನೆರವನ್ನು ಕೊಡಮಾಡಿತು. ಅಲ್ಲದೆ ರಾಜ್ಯದ ಹಣಕಾಸು ನಿಗಮಗಳ ಸ್ಥಾಪನೆ, ಅವುಗಳ ಆಡಳಿತದಲ್ಲಿ ಭಾಗ, ಸಣ್ಣ ಉದ್ಯಮಗಳಿಗೆ ರಾಜ್ಯ ಹಣಕಾಸು ನಿಗಮದ ಮೂಲಕ ಸಾಲ ಮುಂತಾದ ಯೋಜನೆಗಳನ್ನು ಬ್ಯಾಂಕು ರೂಪಿಸಿತು.

ರಿಸರ್ವ್ ಬ್ಯಾಂಕಿನ ಆರಂಭಿಕ ದಿನಗಳ ಬೆಳವಣಿಗೆಯ ಪರಿಚಯವನ್ನು ಈ ಪುಸ್ತಕ ಯಶಸ್ವಿಯಾಗಿ ಮಾಡಿಕೊಡುತ್ತದೆ; ಅಲ್ಲದೆ ಕ್ಲಿಷ್ಟ ವಿಷಯಗಳನ್ನು ಕನ್ನಡದಲ್ಲಿ ಸ್ಪಷ್ಟವಾಗಿ ಖಚಿತವಾಗಿ ಹೇಳಬಹುದು ಎಂಬುದನ್ನು ಅನುವಾದಕರು ತೋರಿಸಿದ್ದಾರೆ. ಈ ದಿಸೆಯಲ್ಲಿ ಪ್ರಕಾಶಕರ ಉದ್ದೇಶ ಸಫಲವಾಗಿದೆ.

**ಜಿಂ. ಶ್ರೀ. ರವೀಂದ್ರ**

---

# ಪಾರಿಭಾಷಿಕ ಶಬ್ದಕೋಶ

ಸಾ. ರಾಜಗೋಪಾಲ
ಜಿ. ಎಸ್. ನರಸಿಂಹಮೂರ್ತಿ

**Back Freight :** ಹಿಂಬಾಕಿ ಸಾಗಣೆ ಶುಲ್ಕ. ಸರಕನ್ನು ಇಳಿಸಬೇಕಾದ ಬಂದರಿನಲ್ಲಿ ಒಂದು ಯುಕ್ತ ಕಾಲದೊಳಗೆ ಆ ಸರಕಿನ ಪಾವತಿ ತೆಗೆದುಕೊಳ್ಳದಿದ್ದಾಗ ನೀಡಬೇಕಾದ ಬಾಡಿಗೆ, ಸಾಗಣೆ ಶುಲ್ಕ. ಅಂಥ ಸಂದರ್ಭದಲ್ಲಿ ಆ ಸರಕನ್ನು ಹೇಗೆ ವಿಲೆ ಮಾಡಬೇಕೆಂಬುದನ್ನು ನಿರ್ಣಯಿಸಲು ಹಡಗಿನ ನಾಯಕನಿಗೆ ಅಂತರ್ನಿಹಿತ ಅಧಿಕಾರ ಇರುತ್ತದೆ. ಈ ಸಂಬಂಧದ ಖರ್ಚನ್ನು ಸರಕಿನ ಮಾಲೀಕ ವಹಿಸಬೇಕಾಗುತ್ತದೆ.

**Backfreight :** ವಾಪಸಾತಿ ಸಾಗಣೆ ಶುಲ್ಕ. ರವಾನೆದಾರನ ತಪ್ಪಿನಿಂದಾಗಿ, ಇಲ್ಲವೇ ರವಾನೆ ಪಡೆಯುವವನು ಅದನ್ನು ಪಡೆಯಲೊಲ್ಲದೆ ಹೋದಾಗ, ಹಡಗಿನ ಮೇಲೆ ಹೇರಿದ ಸರಕಿನ ವಾಪಸು ಸಾಗಣೆಗಾಗಿ ರವಾನೆದಾರ ಪಾವತಿಮಾಡ ಬೇಕಾದ ಬಾಡಿಗೆ, ಸಾಗಣೆ ಶುಲ್ಕ.

**Backlog :** ಹಿಂಬಾಕಿ. ಪೂರೈಸದೆ ಉಳಿದಿರುವ ಕೆಲಸಗಳ ಸಂಚಯ.

**Back spread :** ಅಂತರಪಣನ ದರ ಕೊರತೆ. ಅಂತರಪಣನ ವಹಿವಾಟಿನಲ್ಲಿ ಸಾಧಾರಣಕ್ಕಿಂತ ಕಡಿಮೆ ದರ ವ್ಯತ್ಯಾಸ.

**Bad Debt :** ಕರಡು ಋಣ, ಹೋಕು ಬಾಕಿ. ವಸೂಲುಮಾಡಲಸಾಧ್ಯವೆಂದು ಪರಿಗಣಿತವಾದ ಋಣ. ಇಂಥ ಬಾಕಿ ಯನ್ನು ಅಥವಾ ಋಣವನ್ನು ಆಸ್ತಿಯೆಂದು ಲೆಕ್ಕದಲ್ಲಿ ತೋರಿಸುವುದು ಸರಿಯೆನಿಸದು. ಆದ್ದರಿಂದ ಈ ಮೊಬಲಗನ್ನು ಋಣಗಳ ಖಾತೆಗೆ ಧನಿಸಿ, ಅದನ್ನು ನಷ್ಟವೆಂದು ಪರಿಗಣಿಸಿ ಆ ವರ್ಷದ ಲಾಭ ನಷ್ಟ ಖಾತೆಯಲ್ಲಿ ಋಣಿಸಲಾಗುತ್ತದೆ.

**Bad Debts Collected :** ವಸೂಲಾದ ಕರಡು ಋಣ. ಕರಡು ಋಣವೆಂದು ಪರಿಗಣಿಸಲಾಗಿದ್ದು ಋಣಗಳ ಖಾತೆಗಳಿಗೆ ಧನಿಸಿ ಲಾಭ ನಷ್ಟ ಖಾತೆಯಲ್ಲಿ ಋಣಿಸಲಾದ ಮೊಬಲಗು ಕಾಲಾನಂತರದಲ್ಲಿ ವಸೂಲಾದರೆ ಅದನ್ನು ಆ ವರ್ಷದ ಲಾಭ ವೆಂದು ಪರಿಗಣಿಸಲಾಗುತ್ತದೆ.

**Bad Debts Reserve :** ಕರಡು ಋಣಗಳ ಮೀಸಲು. ಕರಡು ಋಣಗಳ ನಷ್ಟವನ್ನು ಭರಿಸಲು ಲಾಭ ನಷ್ಟ ಖಾತೆಗೆ ಋಣಿಸಿ ನಿರ್ಮಿಸಲಾದ ಮೀಸಲು.

**Bad Delivery :** ಅಸಮರ್ಪಕ ವಶಾವಣೆ. ಈಡು ಮತ್ತು ಸಾಮಗ್ರಿಗಳ ವ್ಯವಹಾರದಲ್ಲಿ ಪಾವತಿ, ಹಕ್ಕುಗಳು, ಪ್ರಮಾಣ ಪತ್ರಗಳು ಮುಂತಾದುವನ್ನು ನಿರ್ದಿಷ್ಟ ನಿಯಮಗಳಿಗೊಳಪಡಿಸದೆ ಮಾಡಿದ ವಶಾವಣೆ.

**Baht :** ಬಾಹ್ಟ್. ಥೈಲೆಂಡಿನ ಹಣದ ಘಟಕ.

**Bail Bond :** ಜಾಮೀನು ಬಾಂಡು. ಢಕ್ಕಾ–ಮುಕ್ಕಿಯ ಪರಿಣಾಮವಾಗಿ ಹಿಡಿದಿಟ್ಟುಕೊಳ್ಳಲಾದ ಹಡಗನ್ನು ಬಿಡಿಸಿಕೊಳ್ಳುವ ಸಲುವಾಗಿ ಬ್ಯಾಂಕರ್ ತನ್ನ ಗ್ರಾಹಕನ ಪರವಾಗಿ ನೀಡುವ ಬಾಂಡು.

**Bailee :** ಜಮಾನತುದಾರ. ಜಮಾನತು ಪಡೆದವ. ಜಮಾನತುದಾತನ ಒಪ್ಪಿಗೆಯ ಪ್ರಕಾರ ವಿಲೆ ಮಾಡುವುದಕ್ಕಾಗಿ ಸ್ವತ್ತನ್ನು ವಶಕ್ಕೆ ಪಡೆದುಕೊಂಡವನು. ಉದಾಹರಣೆ: ಪದಾರ್ಥಗಳ ರಿಪೇರಿ ಮಾಡುವವರು, ಅಗಸರು. ಜಮಾನತು ದಾರರಲ್ಲಿ ನಾನಾ ಬಗೆಗಳುಂಟು. 1972ರ ಭಾರತೀಯ ಕರಾರು ಅಧಿನಿಯಮದ 148ನೆಯ ಪ್ರಕರಣದಲ್ಲಿ ಜಮಾನತು ದಾರನನ್ನು ವ್ಯಾಖ್ಯಿಸಲಾಗಿದೆ.

**Bailee's Receipt :** ಜಮಾನತುದಾರನ ರಸೀತಿ. ಸರಕಿನ ಹಕ್ಕುದಾರನಿಗೆ ಜಮಾನತುದಾರ ಕೊಡುವ ದಾಖಲೆ. ಈ ರಸೀತಿ ನ್ಯಾಸ ರಸೀತಿಗಿಂತ ಹೆಚ್ಚು ಪರಿಣಾಮಕಾರಿಯಾದ್ದರಿಂದ ಬ್ಯಾಂಕರರು ಇಂಥ ರಸೀತಿಗಳನ್ನು ಪಡೆಯುತ್ತಾರೆ.

**Bailment :** ಜಮಾನತು ಒಪ್ಪಿಗೆಯ ಪ್ರಕಾರ ವಿಲೆಮಾಡಲು ಸ್ವತ್ತನ್ನು ವಶಕ್ಕೆ ಕೊಡುವುದು. 1872ರ ಭಾರತೀಯ ಕರಾರು ಅಧಿನಿಯಮದ 148ನೆಯ ಪ್ರಕರಣದ ಪ್ರಕಾರ ಉದ್ದೇಶ ಪೂರೈಸಿದ ಅನಂತರ ಸ್ವತ್ತನ್ನು ಹಿಂದಿರುಗಿಸಬೇಕು, ಅಥವಾ ಅದನ್ನು ವರ್ಗಾವಣೆ ಮಾಡಿದವನ ನಿರ್ದೇಶದಂತೆ ವಿಲೆ ಮಾಡಬೇಕು ಎಂಬ ಕರಾರು ವಿಧಿಸಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ಸರಕನ್ನು ವಶಾವಣೆ ಮಾಡುವುದು.

**Bailor :** ಜಮಾನತುದಾತ. ಒಂದು ಗೊತ್ತಾದ ಉದ್ದೇಶಕ್ಕಾಗಿ ಸ್ವತ್ತನ್ನು ಮತ್ತೊಬ್ಬನ ವಶಕ್ಕೆ ಒಪ್ಪಿಸುವವನು. 1872ರ ಭಾರತೀಯ ಕರಾರು ಅಧಿನಿಯಮದ 148ನೆಯ ವಿಧಿಯ ಪ್ರಕಾರ ಜಮಾನತು ನೀಡುವವನು.

**Balance :** ಶಿಲ್ಕು. ಬ್ಯಾಂಕಿನ ಗ್ರಾಹಕನ ಖಾತೆಯಲ್ಲಿ ಉಳಿದಿರುವ ಮೊಬಲಗು. ಗ್ರಾಹಕ ಯಾವುದೇ ಸಮಯದಲ್ಲಿ ಪಡೆಯಬಹುದಾದ ಮೊಬಲಗು. ಒಂದು ಖಾತೆಯ ಋಣಿಕೆ-ಧನಿಕೆಗಳ ನಡುವಿನ ವ್ಯತ್ಯಾಸ. ತೀರುವೆ ಗೃಹದಲ್ಲಿ ಬ್ಯಾಂಕಿಗೆ ಪಾವತಿಯಾಗಬೇಕಾದ ಅಥವಾ ಬ್ಯಾಂಕ್ ಪಾವತಿಮಾಡಬೇಕಾದ ಮೊಬಲಗು.

**Balance Book :** ತಾಳೆ ಪುಸ್ತಕ. ಈ ಪುಸ್ತಕದಲ್ಲಿ ಖಾತೆಗಳ ಶಿಲ್ಕುಗಳನ್ನು ಬರೆದು ಪ್ರಧಾನ ಪಹಣಿಯೊಂದಿಗೆ ತಾಳೆ ನೋಡಿ ಅದರ ನಿಖರತೆಯನ್ನು ಖಚಿತಪಡಿಸಿಕೊಳ್ಳಲಾಗುತ್ತದೆ.

**Balanced Budget :** ಸಮತೋಲ ಆಯವ್ಯಯ, ಸಮತೋಲ ಬಜೆಟ್ (ನೋಡಿ Budget)

**Balance Certificate :** 1 ಉಳಿಕೆ ಷೇರು ಪ್ರಮಾಣ ಪತ್ರ. 2 ಶಿಲ್ಕು ಪ್ರಮಾಣ ಪತ್ರ. 1 ಷೇರು ಪ್ರಮಾಣ ಪತ್ರ ಪ್ರತಿನಿಧಿಸುವ ಷೇರುಗಳ ಕೆಲಭಾಗ ಮಾರಾಟವಾದಾಗ ಉಳಿದ ಷೇರುಗಳ ಬಗ್ಗೆ ನೀಡುವ ಪ್ರಮಾಣ ಪತ್ರ. 2 ಒಂದು ಖಾತೆಯ ಶಿಲ್ಕು ಎಷ್ಟೆಂಬುದರ ಬಗ್ಗೆ ನೀಡುವ ಪ್ರಮಾಣ ಪತ್ರ.

**Balance held abroad :** ವಿದೇಶಗಳಲ್ಲಿರುವ ಶಿಲ್ಕು. ವಿದೇಶಗಳಲ್ಲಿ ಒಂದು ದೇಶ ಹೊಂದಿರುವ ಶಿಲ್ಕು.

**Balance of Payments (BOP) :** ಪಾವತಿ ಶಿಲ್ಕು (ಪಾಶಿ). ಅಂತರರಾಷ್ಟ್ರೀಯ ಹಣಕಾಸಿನ ವ್ಯವಹಾರಗಳಲ್ಲಿ ಗೋಚರ ಮತ್ತು ಅಗೋಚರ ವ್ಯವಹಾರಗಳ ಅಡಿಯಲ್ಲಿ ಒಂದು ದೇಶ ಮಾಡಬೇಕಾದ ಹಾಗೂ ಅದಕ್ಕೆ ಬರಬೇಕಾದ ಪಾವತಿಗಳ ವ್ಯತ್ಯಾಸ. ಆಮದು-ರಫ್ತು ವಹಿವಾಟುಗಳ ಫಲವಾದ ಶಿಲ್ಕನ್ನು ವ್ಯಾಪಾರ ಶಿಲ್ಕು ಎಂದು ಕರೆಯಲಾಗುತ್ತದೆ. ಇದು ಗೋಚರ ವ್ಯವಹಾರಗಳ ಶಿಲ್ಕು. ಅಗೋಚರ ಬಾಬುಗಳು ವಿಮೆ, ನೌಕಾಯಾನ, ವಲಸಿಗರು ಮಾಡುವ ಖರ್ಚು, ಅನಿವಾಸಿಗಳ ಪಾವತಿ ಇತ್ಯಾದಿಗಳನ್ನೊಳಗೊಂಡಿರುತ್ತದೆ.

**Balance of Profit/Loss from Last Balance Sheet :** ಹಿಂದಿನ ಸ್ಥಿತಿ ವಿವರಣ ಪಟ್ಟಿಯಲ್ಲಿ (ಅಢಾವೆ ಪತ್ರಿಕೆ) ನಮೂದಿತವಾಗಿರುವ, ಮರು ವರ್ಷಕ್ಕೆ ತರಲಾಗುವ ಲಾಭ/ನಷ್ಟ ಶಿಲ್ಕು.

**Balance of Trade :** ವ್ಯಾಪಾರ ಶಿಲ್ಕು. ಒಂದು ಗೊತ್ತಾದ ವರ್ಷದ ದೇಶದ ಆಮದು ಮತ್ತು ರಫ್ತುಗಳ ಮೊತ್ತಗಳ ನಡುವಣ ವ್ಯತ್ಯಾಸ. ಆಮದಿನ ಮೊತ್ತಕ್ಕಿಂತ ರಫ್ತಿನ ಮೊತ್ತ ಹೆಚ್ಚಾಗಿದ್ದರೆ ಅನುಕೂಲ(ಕರ) ವ್ಯಾಪಾರ ಶಿಲ್ಕು. ರಫ್ತಿನ ಮೊತ್ತಕ್ಕಿಂತ ಆಮದಿನ ಮೊತ್ತ ಹೆಚ್ಚಾಗಿದ್ದರೆ ಪ್ರತಿಕೂಲ (ಕರ) ವ್ಯಾಪಾರ ಶಿಲ್ಕು.

**Balance Sheet :** ಸ್ಥಿತಿ ವಿವರಣ ಪಟ್ಟಿ, ಅಢಾವೆ ಪತ್ರಿಕೆ. ಒಂದು ಸಂಸ್ಥೆಯ ಅಥವಾ ವ್ಯಕ್ತಿಯ ಹೊಣೆಗಾರಿಕೆಗಳನ್ನು ಒಂದು ಪಾರ್ಶ್ವದಲ್ಲೂ ಅವುಗಳನ್ನು ಪೂರೈಸಲು ಇರುವ ಆಸ್ತಿಗಳನ್ನು ಇನ್ನೊಂದು ಪಾರ್ಶ್ವದಲ್ಲೂ ತೋರಿಸುವ ತಃಖ್ತೆ. ಈ ತಃಖ್ತೆಯು ಆಸ್ತಿ ಮತ್ತು ಹೊಣೆಗಾರಿಕೆಗಳ ನೈಜಪರಿಸ್ಥಿತಿಯನ್ನು ಬಿಂಬಿಸಬೇಕು. ಆರ್ಥಿಕ ಪರಿಸ್ಥಿತಿಯನ್ನು ಉತ್ಪ್ರೇಕ್ಷೆ ಮಾಡಬಾರದು. ಆದರೆ ಹೀಗೆ ಬಿಂಬಿತವಾದುದಕ್ಕಿಂತ ಹೆಚ್ಚು ಭದ್ರವಾಗಿ ಆರ್ಥಿಕ ಸ್ಥಿತಿ ಇದ್ದರೆ ಪರವಾಗಿಲ್ಲ. ಈ ತಃಖ್ತೆ ಒಂದು ನಿಶ್ಚಿತ ದಿನದಂದು ಇರುವ ಸಂಸ್ಥೆಯ ಪರಿಸ್ಥಿತಿಯ ಸೂಚಕ. ಸಂಸ್ಥೆಯ ಕನಿಷ್ಠ ಇಬ್ಬರು (ಒಬ್ಬರೇ ಇದ್ದಲ್ಲಿ ಆ) ನಿರ್ದೇಶಕರು ಈ ತಃಖ್ತೆಗೆ ಸಹಿಮಾಡಬೇಕು. ಇದನ್ನು ಲೆಕ್ಕಪತ್ರ ತಪಾಸಕರು ದೃಢೀಕರಿಸಬೇಕು. ತಃಖ್ತೆಯನ್ನು ತಪಾಸಕರ ವರದಿಯೊಡನೆ ಸರ್ವ ಸದಸ್ಯರ ಸಭೆಯಲ್ಲಿ ಮಂಡಿಸಬೇಕು.

**Balance with Reserve Bank of India :** ರಿಸರ್ವ್ ಬ್ಯಾಂಕಿನಲ್ಲಿರುವ ಶಿಲ್ಕು. ಭಾರತೀಯ ರಿಸರ್ವ್ ಬ್ಯಾಂಕಿನಲ್ಲಿ ಒಂದು ಬ್ಯಾಂಕು ಹೊಂದಿರುವ ಶಿಲ್ಕು.

**Balboa :** ಬಲ್ಬೋವ. ಪನಾಮಾ ದೇಶದ ಹಣಕಾಸು ಘಟಕ. ಇದನ್ನು ನೂರು ಸೆಂಟಿಸಿಮೋಸ್‌ಗಳಾಗಿ ವಿಭಜಿಸಲಾಗಿದೆ.

**Balance Ticket :** ಶೇಷ ಪತ್ರ. ಷೇರು ಪ್ರಮಾಣ ಪತ್ರದ ಕೆಲ ಷೇರುಗಳು ಮಾರಲ್ಪಟ್ಟಾಗ ಉಳಿದ ಷೇರುಗಳ ಬಗ್ಗೆ ಕೊಡುವ ಗುರ್ತಿನ ಚೀಟಿ. ಈ ಗುರ್ತಿನ ಚೀಟಿಯ ವಿನಿಮಯದೊಂದಿಗೆ ಹೊಸ ಷೇರು ಪತ್ರವನ್ನು ಕೊಡಲಾಗುವುದು.

**Bani :** ಬನಿ. ರುಮೇನಿಯ ದೇಶದ ಹಣಕಾಸು ಘಟಕವಾದ 'ಲ್ಯು'ನ ನೂರನೆಯ ಒಂದು ಭಾಗ.

**Bank :** ಬ್ಯಾಂಕು. ಹಣದಲ್ಲಿ ವ್ಯವಹಾರ ಮಾಡುವ ಸಂಸ್ಥೆ. ಕೇಳಿದಾಗ ಕೊಡುವ ಇತರರಿಂದ ಠೇವಣಿಗಳನ್ನು ಸ್ವೀಕರಿಸುವುದೂ ಸಾಲ ನೀಡುವುದೂ ಬ್ಯಾಂಕಿನ ಮುಖ್ಯ ಕಾರ್ಯಭಾರಗಳು. ಇದಲ್ಲದೆ ಇತರ ನಾನಾ ಬಗೆಯ ಅನುಬಂಧಿ ಕಾರ್ಯಭಾರಗಳನ್ನೂ ಸರ್ವೋಪಯೋಗಿ ಸೇವೆಗಳನ್ನೂ ಬ್ಯಾಂಕು ನಿರ್ವಹಿಸುತ್ತದೆ. ಬ್ಯಾಂಕುಗಳು ಸಾಮಾನ್ಯವಾಗಿ ನಿರ್ವಹಿಸುವ ವ್ಯವಹಾರಗಳು ಇವು: 1 ಗ್ರಾಹಕನಿಂದ ಠೇವಣಿಗಳ ಸ್ವೀಕಾರ, 2 ಗ್ರಾಹಕರ ಚೆಕ್ಕುಗಳ ಪಾವತಿ, 3 ಗ್ರಾಹಕರಿಗಾಗಿ ಹುಂಡಿ. ವಚನ ಪತ್ರ ಮುಂತಾದವುಗಳ ವಟಾವಣೆ, 4 ಗ್ರಾಹಕರಿಗೆ ಸಾಲ, ಮೀರೆಳೆತ ಸೌಲಭ್ಯ ಮುಂತಾದವುಗಳ ನೀಡಿಕೆ, 5 ಗ್ರಾಹಕರಿಗಾಗಿ ಇತರ ಬ್ಯಾಂಕುಗಳ ಅಭಿಕರ್ತೃವಾಗಿ ಕಾರ್ಯ ನಿರ್ವಹಣೆ, 6 ಗ್ರಾಹಕರ ವಿದೇಶಿ ವ್ಯವಹಾರಗಳ ನಿರ್ವಹಣೆ, 7 ಭದ್ರ ಸುಪರ್ದಿಗಳಾಗಿ ಅಮೂಲ್ಯ ವಸ್ತುಗಳ ಸ್ವೀಕಾರ, ಗ್ರಾಹಕರ ಪರವಾಗಿ ಪಾವತಿ, ಹಣ ಸ್ವೀಕಾರ, ಷೇರು ಪ್ರತಿಭೂತಿಗಳೇ ಮುಂತಾದುವನ್ನು ಗ್ರಾಹಕರ ಪರವಾಗಿ ಕೊಳ್ಳುವುದು, ಮಾರುವುದು, 9 ಆಡಳಿತ ನಿರ್ವಹಣೆ, ನ್ಯಾಸಧಾರಣೆ ಮುಂತಾದವು, 8 ಪ್ರಯಾಣಿಕರ ಚೆಕ್ಕು, ಉದರಿ ಪತ್ರ ಇತ್ಯಾದಿಗಳ ನೀಡಿಕೆ.

**Bankable :** ಬ್ಯಾಂಕಿಂಗ್ ಯೋಗ್ಯ. ಬ್ಯಾಂಕಿನ ಉದರಿ ನೆರವು ಪಡೆಯಲು ಯೋಗ್ಯವಾದ್ದು.

**Bank Acceptance :** ಬ್ಯಾಂಕ್ ಒಪ್ಪಿಗೆ. ಬ್ಯಾಂಕು ತನ್ನ ಗ್ರಾಹಕನ ಪರವಾಗಿ ಪಾವತಿ ಮಾಡಲು ಒಪ್ಪಿಕೊಂಡ ಹುಂಡಿ. ಉದಾ: ಬ್ಯಾಂಕಿನ ಗ್ರಾಹಕ ಅಮೆರಿಕದ ಕೆಲವು ಸರಕುಗಳನ್ನು ಕೊಳ್ಳುತ್ತಾನೆ; ಬ್ಯಾಂಕಿನ ಮೂಲಕ ತನಗೆ ಕಳಿಸಲ್ಪಟ್ಟ ಹುಂಡಿಯನ್ನು ಒಪ್ಪಿಕೊಳ್ಳಬೇಕೆಂದು ತನ್ನ ಬ್ಯಾಂಕನ್ನು ಕೋರುತ್ತಾನೆ. ಗ್ರಾಹಕನ ಬ್ಯಾಂಕ್ ಅದನ್ನು ಒಪ್ಪಿಕೊಂಡರೆ ಹುಂಡಿಯ ರಚಕನಿಗೆ ತತ್‌ಕ್ಷಣ ಹಣ ದೊರೆಯುತ್ತದೆ. ಅವನು ಅದನ್ನು ವಟಾಯಿಸಿ ಹಣ ಪಡೆಯಬಹುದು.

ಬ್ಯಾಂಕಿನ ಸ್ಥಿತಿ ವಿವರಣ ಪಟ್ಟಿಯಲ್ಲಿ ತಾನು ಒಪ್ಪಿಗೆ ನೀಡಿರುವ ಹುಂಡಿಗಳನ್ನು ತನ್ನ ಹೊಣೆಯೆಂದು ತೋರಿಸುತ್ತದೆ; ಇದಕ್ಕೆ ಪ್ರತಿಯಾಗಿ ಆ ಪಟ್ಟಿಯ ಆಸ್ತಿಗಳ ಪಾರ್ಶ್ವದಲ್ಲಿ ಗ್ರಾಹಕನಿಂದ ಆ ಹುಂಡಿಗಳ ಬಾಬ್ತು ಬರಬೇಕಾದ ಹಣವನ್ನು ಆಸ್ತಿಯೆಂದು ತೋರಿಸಿರುತ್ತದೆ.

**Bank Accounts :** ಬ್ಯಾಂಕ್ ಖಾತೆಗಳು. ಬ್ಯಾಂಕಿನಲ್ಲಿರುವ ವಿವಿಧ ಬಗೆಯ ಖಾತೆಗಳು. ಗ್ರಾಹಕ ತನ್ನ ಬ್ಯಾಂಕಿನಲ್ಲಿ ಒಂದು ಖಾತೆ ತೆರೆದಾಗ ಅದನ್ನು ಹಾಗೆಂದು ಕರೆದುಕೊಳ್ಳುತ್ತಾನೆ. ಅದು ಸಾಮಾನ್ಯವಾಗಿ ನಗದಿಯಂತೆಯೇ ಪರಿಭಾವಿತವಾಗುತ್ತದೆ.

**Bank Advances :** ಬ್ಯಾಂಕ್ ಮುಂಗಡ. ಬ್ಯಾಂಕು ತನ್ನ ಗ್ರಾಹಕರಿಗೆ ನೀಡಿರುವ ಸಾಲ, ನಗದಿ ಉದರಿ, ಮೀರೆಳೆತ ಮುಂತಾದವು. ಬ್ಯಾಂಕಿನ ಸ್ಥಿತಿವಿವರಣ ಪಟ್ಟಿಯಲ್ಲಿ ಈ ಬಾಬನ್ನು ಆಸ್ತಿಗಳ ಪಾರ್ಶ್ವದಲ್ಲಿ ತೋರಿಸಲಾಗುತ್ತದೆ.

**Bank Amalgamation :** ಬ್ಯಾಂಕುಗಳ ಸಮಾಮೇಲನ. ಎರಡು ಅಥವಾ ಹೆಚ್ಚು ಬ್ಯಾಂಕುಗಳು ಸೇರಿ ಒಂದೇ ಸಂಸ್ಥೆಯಾಗುವುದು. ಆ ಬ್ಯಾಂಕುಗಳೆಲ್ಲ ಅವಸಾಯನಗೊಂಡು ಹೊಸದೊಂದು ಸಂಸ್ಥೆ ಜನ್ಮ ತಳೆಯುತ್ತದೆ.

**Bank as Executor and Trustee :** ನಿರ್ವಾಹಕ ಹಾಗೂ ನ್ಯಾಸಧಾರಿಯಾಗಿ ಬ್ಯಾಂಕು. ಬ್ಯಾಂಕಿನ ನಿರ್ವಾಹಕ ಹಾಗೂ ನ್ಯಾಸಧಾರಿ ವಿಭಾಗ ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ: 1 ಉಯಿಲು ಪತ್ರದ ನ್ಯಾಸಧಾರಣೆ/ನಿರ್ವಹಣೆ, 2 ಉಯಿಲು ಪತ್ರಕ್ಕೆ ಅನುಸಾರವಾಗಿ ಸ್ವತ್ತಿನ ವಿಲೆ. 3 ಇತ್ಯರ್ಥವಾದ ಉಯಿಲಿನ ಸ್ವತ್ತುಗಳು ಅಥವಾ ನಿಧಿಗಳ ಮೇಲ್ವಿಚಾರಣೆ, 4 ಪಿಂಚಣಿ ಯೋಜನೆಗಳು, 5 ನ್ಯಾಸಗಳ ಪರಿಪಾಲನೆ.

ಒಂದು ಬ್ಯಾಂಕನ್ನು ನ್ಯಾಸಧಾರಿಯಾಗಿ ಮಾಡುವುದರಿಂದ ಸಾರ್ವಜನಿಕರಿಗೆ ಕೆಲವು ಅನುಕೂಲಗಳು ಲಭಿಸುತ್ತವೆ. ಖಾಸಗಿ ನ್ಯಾಸಧಾರಿ ನಿವೃತ್ತನಾದಾಗ ಅಥವಾ ಮೃತಿಹೊಂದಿದಾಗ ಬರುವ ಖರ್ಚು ಹಾಗೂ ತೊಂದರೆಗಳು ಇರುವುದಿಲ್ಲ. ಉತ್ತಮ ಆಡಳಿತ, ನಿರಂತರತೆ, ಭದ್ರತೆ, ಗೋಪ್ಯತೆ ಹಾಗೂ ಸ್ವತ್ತಿನ ಖಾತೆಯ ನಿಷ್ಪಾಕ್ಷಿಕ ತನಿಖೆಗಳನ್ನು ಬ್ಯಾಂಕು ಒದಗಿಸುತ್ತದೆ.

ನ್ಯಾಸಧಾರಿ ಪಡೆಯುವ ಶುಲ್ಕ ಉಯಿಲಿನ ಆದೇಶದ ಪ್ರಕಾರದಂತೆಯೇ ಇರಬೇಕಾಗುತ್ತದೆ. ಹೊಸದಾಗಿ ನ್ಯಾಸವನ್ನು ಸ್ವೀಕರಿಸಿದರೆ ನ್ಯಾಸದ ಫಲಾನುಭವಿಗಳ ಆದೇಶದಂತೆ ಅದನ್ನು ಪಡೆಯಬೇಕಾಗುತ್ತದೆ.

**Bank Authorised to deal in Foreign Exchange :** ವಿದೇಶಿ ವಿನಿಮಯ ವ್ಯವಹಾರ ನಡೆಸಲು ಅಧಿಕೃತವಾದ ಬ್ಯಾಂಕ್. ವಿದೇಶಿ ವಿನಿಮಯ ವ್ಯವಹಾರ ನಡೆಸಲು ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮದ ಪ್ರಕಾರ ರಿಸರ್ವ್ ಬ್ಯಾಂಕಿನಿಂದ ಪರವಾನಗಿ ಪಡೆದ ಬ್ಯಾಂಕು.

**Bank Balance :** ಬ್ಯಾಂಕು ಶಿಲ್ಕು. ಜಮೆಯಾದ ಎಲ್ಲ ಬಾಬುಗಳನ್ನು ಕೂಡಿ, ಪಾವತಿಯಾದ ಚೆಕ್ಕುಗಳ ಮೊತ್ತ ಹಾಗೂ ಸೇವಾ ಶುಲ್ಕಗಳನ್ನು ಕಳೆದ ಮೇಲೆ ಉಳಿಯುವ ಮೊಬಲಗು. ಒಬ್ಬ ವ್ಯಕ್ತಿ ತನ್ನ ಬ್ಯಾಂಕ್ ಖಾತೆಯಲ್ಲಿ ಹೊಂದಿರುವ ಧನಿಕೆ ಶಿಲ್ಕು. ಇದು ನಗದಿನಂತೆಯೇ ಪರಿಗಣಿತವಾಗುತ್ತದೆ.

**Bank Bill :** ಬ್ಯಾಂಕು ಹುಂಡಿ. ಬ್ಯಾಂಕು ರಚಿಸಿದ ಅಥವಾ ಒಪ್ಪಿದ ಹುಂಡಿ, ಇಂಥ ಹುಂಡಿಗಳ ವಟಾವಣೆ ದರಗಳು ವ್ಯಾವಹಾರಿಕ ಹುಂಡಿಗಳ ವಟಾವಣೆ ದರಕ್ಕಿಂತ ಕಡಿಮೆ ಇರುತ್ತವೆ.

**Bank Bills Receivable Account :** ಬ್ಯಾಂಕ್ ಪ್ರಾಪ್ಯ ಹುಂಡಿಗಳ ಖಾತೆ. ಬ್ಯಾಂಕು ತನ್ನಲ್ಲಿ ವಟಾಯಿಸಲಾದ ಹುಂಡಿಗಳ ಮೊತ್ತವನ್ನು ಈ ಖಾತೆಗೆ ಋಣಿಸಲಾಗುತ್ತದೆ. ಗಡುವಿನ ದಿನದಂದು ಹುಂಡಿ ಮೊಬಲಗನ್ನು ಸ್ವೀಕರಿಸಿದಾಗ ಈ ಖಾತೆಯನ್ನು ಧನಿಸಲಾಗುತ್ತದೆ.

**Bank Barrowings :** ಬ್ಯಾಂಕ್ (ಪಡೆದ) ಕಡಗಳು, ಸಾಲಗಳು. ಬ್ಯಾಂಕು ತನ್ನ ಆವಶ್ಯಕತೆಗಾಗಿ ಅನ್ಯ ಮೂಲಗಳಿಂದ ಪಡೆದ ಕಡ, ಸಾಲ, ಎರವಲು.

**Bank Buildings :** ಬ್ಯಾಂಕು ಕಟ್ಟಡ.

**Bank Call Rate :** ಬ್ಯಾಂಕ್ ಕರೆ ದರ. ತುರ್ತು ಆವಶ್ಯಕತೆಗಳಿಗಾಗಿ ಬ್ಯಾಂಕು ಪಡೆಯುವ ಕರೆ ಹಣಕ್ಕೆ ತೆರಬೇಕಾದ ಬಡ್ಡಿ ದರ.

**Bank Charges :** ಬ್ಯಾಂಕು ಶುಲ್ಕಗಳು. ಬ್ಯಾಂಕು ತನ್ನ ಗ್ರಾಹಕರಿಗೆ ನೀಡುವ ಸೇವೆಗಳಿಗೆ ವಿಧಿಸುವ ಶುಲ್ಕಗಳು.

**Bank Consortium :** (ನೋಡಿ Consortium) ಬ್ಯಾಂಕ್ ಸಂಗಮ. ವಿವಿಧ ದೇಶಗಳ, ವಿವಿಧ ಕ್ಷೇತ್ರಗಳಲ್ಲಿ ಪ್ರಾವೀಣ್ಯ ಗಳಿಸಿದ, ಬ್ಯಾಂಕುಗಳು ಸಾಲ ನೀಡುವ ಅಥವಾ ಬೇರಾವುದೇ ಬ್ಯಾಂಕಿಂಗ್ ವ್ಯವಹಾರ ನಡೆಸುವ ಉದ್ದೇಶದಿಂದ ಒಂದುಗೂಡುವುದು. ಇದರಿಂದ ನುರಿತ ಸಿಬ್ಬಂದಿಯ ಸೇವೆ, ಹೆಚ್ಚಿನ ಅಪಾಯಸಂಭವವನ್ನು ಎದುರಿಸುವ ಸಾಮರ್ಥ್ಯ ಮುಂತಾದ ಅನೇಕ ಅನುಕೂಲಗಳು ಲಭ್ಯವಾಗುತ್ತವೆ,

**Bank Credit :** ಬ್ಯಾಂಕ್ ಉದರಿ. ಬ್ಯಾಂಕು ತನ್ನ ಗ್ರಾಹಕರಿಗೆ ಸಾಲ, ನಗದು ಉದರಿ, ಮೀರೆಳೆತ ಮುಂತಾದವುಗಳ ರೂಪದಲ್ಲಿ ನೀಡುವ ಕಡ. ಸರಕಾರಕ್ಕೂ ಅದು ಉದರಿ ನೀಡುತ್ತದೆ.

**Bank Currency :** ಬ್ಯಾಂಕ್ ಕರೆನ್ಸಿ. ಬ್ಯಾಂಕ್ ನೋಟುಗಳು.

**Bank Deposit :** ಬ್ಯಾಂಕ್ ಠೇವಣಿ. ಗ್ರಾಹಕರು ಬ್ಯಾಂಕಿನಲ್ಲಿ ತಮ್ಮ ವಿವಿಧ ಖಾತೆಗಳ ಅಡಿಗಳಲ್ಲಿ ಜಮೆ ಮಾಡಿರುವ ಹಣ. ಬ್ಯಾಂಕ್ ಠೇವಣಿಗಳ ಮೊಬಲಗುಗಳನ್ನು ಗ್ರಾಹಕರು ಕೇಳಿದ ಕೂಡಲೆ ಅಥವಾ ಒಂದು ಗೊತ್ತಾದ ಅವಧಿಯ ಅನಂತರ, ಇಲ್ಲವೇ ಕೆಲವು ನಿರ್ಬಂಧಗಳಿಗೆ ಒಳಪಟ್ಟು ಹಿಂದಕ್ಕೆ ಪಡೆದುಕೊಳ್ಳಬಹುದು. ಬ್ಯಾಂಕು ಠೇವಣಿಗಳು ಸಾಮಾನ್ಯವಾಗಿ ಮೂರು ಬಗೆ—ಚಾಲ್ತಿ ಠೇವಣಿ, ಉಳಿತಾಯ ಠೇವಣಿ ಹಾಗೂ ನಿರಕು ಅಥವಾ ಸ್ಥಿರ ಠೇವಣಿ.

**Bank Directors :** ಬ್ಯಾಂಕ್ ನಿರ್ದೇಶಕರು. ಬ್ಯಾಂಕಿನ ಆಡಳಿತ ನಡೆಸಲು ಬ್ಯಾಂಕಿನ ಷೇರುದಾರರಿಂದ ಚುನಾಯಿತರಾದವರು ಅಥವಾ ಸರಕಾರದಿಂದ ನಾಮಕರಣಗೊಂಡವರು. ಇವರ ಮಂಡಲಿಗೆ ನಿರ್ದೇಶಕರ ಮಂಡಲಿ ಎಂಬುದು ರೂಢಿಯಾಗಿ ಬಂದಿರುವ ಹೆಸರು.

**Bank Draft :** ಬ್ಯಾಂಕ್ ಡ್ರಾಫ್ಟ್. ಒಂದು ಬ್ಯಾಂಕ್ ಕಛೇರಿ ಅದೇ ಬ್ಯಾಂಕಿನ ಇನ್ನೊಂದು ಕಛೇರಿಯ ಮೇಲೆ ಅಥವಾ ಇನ್ನೊಂದು ಬ್ಯಾಂಕಿನ ಕಛೇರಿಯ ಮೇಲೆ ನಿಡುವ ಹಣ ಪಾವತಿ ಆದೇಶ. ಆ ಆದೇಶದಲ್ಲಿ ನಮೂದಾಗಿರುವ ವ್ಯಕ್ತಿಗೆ ಅಥವಾ ಆತನ ಆದೇಶಕ್ಕೆ ಬೇಡಿದಾಗ ದೇಯವಾಗಿರುತ್ತದೆ.

**Bank Endorsement :** ಬ್ಯಾಂಕಿನ ಹಿಂಬರಹ. ಬ್ಯಾಂಕಿನ ವಹಿವಾಟುಗಳ ಮೂಲಕ ಹಾದು ಹೋಗುವ ಸಂಲೇಖಗಳ ಹಿಂಬದಿಯಲ್ಲಿ ಬ್ಯಾಂಕು ಮಾಡುವ ಬರಹ.

**Banker :** ಬ್ಯಾಂಕರ್. ಬ್ಯಾಂಕಿಂಗ್ ವ್ಯವಹಾರ ನಡೆಸುವವ. ನೋಡಿ Bank.

